ಶ್ರೀಮದಾನಂದತೀರ್ಥಭಗವತ್ಪಾದರು ರಚಿಸಿದ
ಸರ್ವಮೂಲ ಗ್ರಂಥಗಳು

# ದ್ವಾದಶಸ್ತೋತ್ರ

ಅನುವಾದಕರು:
ವಿದ್ವಾನ್ ಶ್ರೀರಾಮವಿಟ್ಠಲಾಚಾರ್ಯ

ನೀಡಬಲ್ಲದು. ಆದ್ದರಿಂದ ಭಗವದ್ಭಕ್ತರೆಲ್ಲರೂ ಈ ಗ್ರಂಥವನ್ನು ಅವಶ್ಯವಾಗಿ ಅಭ್ಯಸಿಸಲೇಬೇಕು.

**ಯಸ್ಸರ್ವಗುಣಸಂಪೂರ್ಣಃ ಸರ್ವದೋಷವಿವರ್ಜಿತಃ।**
**ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ॥ ೨೯೦ ॥**

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಃ**
**ಶ್ರೀಕೃಷ್ಣಾಮೃತಮಹಾರ್ಣವಃ ಸಮಾಪ್ತಃ॥**

ಶ್ರೀಹರಿ ಸಕಲಗುಣ ಪರಿಪೂರ್ಣ, ಸಕಲ ದೋಷದೂರ, ಸ್ವಯಂತೃಪ್ತ, ಸರ್ವೋತ್ತಮ, ನನಗೆ ಅತ್ಯಂತ ಆತ್ಮೀಯ ದೇವ. ಆತ ಈ ಕೃತಿಯಿಂದ ಸಂತುಷ್ಟನಾಗಲಿ.

**ಇಲ್ಲಿಗೆ ಶ್ರೀಕೃಷ್ಣಾಮೃತ ಮಹಾರ್ಣವ ಮುಗಿಯಿತು.**

ಶ್ರೀಮದಾನಂದತೀರ್ಥಭಗವತ್ಪಾದರು ರಚಿಸಿದ
ಸರ್ವಮೂಲ ಗ್ರಂಥಗಳು

# ದ್ವಾದಶಸ್ತೋತ್ರ

ಅನುವಾದಕರು:
ವಿದ್ವಾನ್ ಶ್ರೀರಾಮವಿಟ್ಠಲಾಚಾರ್ಯ

ಕುರು ಭುಂಕ್ಷ್ವ ಚ ಕರ್ಮ ನಿಜಂ ನಿಯತಮ್।
ಹರಿಪಾದವಿನಮ್ರಧಿಯಾ ಸತತಮ್॥

ಹರಿಪಾದ ಸ್ಮರಿಸುತ್ತ ವಿಹಿತಕರ್ಮವ ಮಾಡಿ ಬಂದ ಫಲವನ್ನು ಹರಿಭಕ್ತಿಯಿಂದ ಅನುಭವಿಸು.

ತದಲಂ ಬಹುಲೋಕವಿಚಿಂತನಯಾ।
ಪ್ರವಣಂ ಕುರು ಮಾನಸಮೀಶಪದೇ॥

ಸಾಕು ಸಾಕಿನ್ನು ಈ ಜಗದ ಚಿಂತೆ. ಈಶಪದದೋಳಿನ್ನು ಮನವ ಹರಿಸು.

॥ ಓಂ ನಮೋ ಭಗವತೇ ವಾಸುದೇವಾಯ॥

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ರಚಿಸಿದ

# ದ್ವಾದಶಸ್ತೋತ್ರ

॥ ಹರಿಃ ಓಂ ॥

**ವಂದೇ ವಂದ್ಯಂ ಸದಾನಂದಂ ವಾಸುದೇವಂ ನಿರಂಜನಮ್।**
**ಇಂದಿರಾಪತಿಮಾದ್ಯಾದಿವರದೇಶವರಪ್ರದಮ್ ॥ ೧ ॥**

ಬ್ರಹ್ಮಾದಿ ದೇವತೆಗಳಿಂದ ನಮನ ಮತ್ತು ಸ್ತವನ ಯೋಗ್ಯನು. ದುಃಖ, ಪರಾಧೀನತೆ ಮೊದಲಾದ ದೋಷ ಸಂಪರ್ಕವಿಲ್ಲದ ಆನಂದಾದಿ ಕಲ್ಯಾಣಗುಣ ಸ್ವರೂಪನು. ಎಲ್ಲಾ ದೋಷಗಳಿಗೆ ಮೂಲವಾದ ಅವಿದ್ಯಾ ರೂಪ ದೋಷರಹಿತನು. ಪಿಧಿಭವಾದಿಗಳಿಗೂ ಮಿಗಿಲಾದ ಇಂದಿರೆಗೂ ಪತಿಯು. ಎಲ್ಲರಿಗೂ ವರ ನೀಡುವ ಬ್ರಹ್ಮ ರುದ್ರಾದಿಗಳಿಗೂ ವರಪ್ರದನು. ಎಲ್ಲಾ ಕಡೆ ತಾನಿದ್ದು, ತನ್ನಲ್ಲಿ ಎಲ್ಲವನ್ನು ಇರಿಸಿಕೊಂಡಿರುವವನು(ವಾಸು). ವಿಶ್ವದ ಸೃಷ್ಟಿ, ಸ್ಥಿತಿ, ಲಯವೆ ಮುಂತಾದವು ಕ್ರೀಡೆ ಅವನಿಗೆ (ದೇವಂ). ಅಂತಹ ವಾಸುದೇವನನ್ನು ಯಾವಾಗಲೂ ನಮಿಸುತ್ತೇನೆ ಮತ್ತು ಸ್ತುತಿಸುತ್ತೇನೆ.

**ವಿವರಣೆ:**

ಶುದ್ಧಸ್ಫಟಿಕಸಂಕಾಶಂ ವಾಸುದೇವಂ ನಿರಂಜನಮ್।
ಚಿಂತಯೀತ ಯತಿರ್ನಾನ್ಯಂ ಜ್ಞಾನರೂಪಾದೃತೇ ಹರಿಮ್॥ -ಮಾತ್ಸ್ಯ

ಎಂಬ ಪ್ರಮಾಣದಂತೆ ಯತಿಗಳು ವಾಸುದೇವರೂಪಧ್ಯಾನವನ್ನು ಅವಶ್ಯವಾಗಿ ಮಾಡಬೇಕು. ಅದಕ್ಕೆಂದೇ ಶ್ರೀಮಧ್ವರು ವಾಸುದೇವನ ಸರ್ವಾವಯವ ಧ್ಯಾನವನ್ನು ಮೊದಲ ಸ್ತೋತ್ರದಲ್ಲಿ ಮಾಡಿರುವರು.(ಶ್ರೀ.ಭ.ಕ.ಟೀ.)

ಸದಾನಂದಂ - ಸತ್ - ಪ್ರಾಣದೇವರನ್ನು ಆನಂದಂ - ಆನಂದಗೊಳಿಸುವವನನ್ನು. ''ಸದ್ವಾವ ಪ್ರಾಣಃ'' ಎಂಬ ಶ್ರುತಿಯಲ್ಲಿ ಸತ್ ಎಂದರೆ 'ಜ್ಞಾನಾದಿಗುಣ ಸಿದ್ಧಿಯಾದ ಪ್ರಾಣನು' ಎಂದು ತಿಳಿಸಲಾಗಿದೆ.

**ವಿವರಣೆ:** 'ಮಯ್ಯನಂತಗುಣೇಽನಂತೇ ಗುಣತೋಽನಂತ ವಿಗ್ರಹೇ'। (ಭಾಗ.) 'ಸತ್ಯಂ ಜ್ಞಾನಮನಂತಂ ಬ್ರಹ್ಮ' (ತೈ.ಉ.) ಮುಂತಾದ ಪ್ರಮಾಣಗಳು ತಿಳಿಸುವಂತೆ ಭಗವಂತನು ದೇಶ, ಕಾಲ, ಗುಣಗಳ ಮಿತಿ ಇಲ್ಲದವನು. ಆದ್ದರಿಂದಲೇ ಅವನು ಅನಂತ ಎನಿಸಿರುವುದು. ಅವನ ಅವಯವಗಳಿಗೂ ಅವನಿಗೂ ಇನಿತೂ ಭೇದವಿಲ್ಲ. ಆದ್ದರಿಂದ ಶ್ರೀಹರಿಯ ವಕ್ಷಸ್ಥಲವೂ ಅನಂತ. ವ್ಯಾಪ್ತವಾದ ವಕ್ಷಸ್ಥಲವನ್ನು ಸೀಮಿತ ಬುದ್ಧಿಯ ಭಕ್ತರು ಚಿಂತಿಸುವುದು ಹೇಗೆ? ದಯಾನಿಧಿಯಾದ ಭಗವಂತ ಅನಂತವಾದ ವಕ್ಷಸ್ಥಲವನ್ನು ಭಕ್ತರ ಧ್ಯಾನಾನುಕೂಲಕ್ಕಾಗಿ ಪರಿಮಿತವಾಗಿರುವಂತೆ ತೋರುವನು.

**ಶಂಖಚಕ್ರಗದಾಪದ್ಮಧರಾಶ್ಚಿಂತ್ಯಾ ಹರೇರ್ಭುಜಾಃ।**
**ಪೀನವೃತ್ತಾ ಜಗದ್ರಕ್ಷಾಕೇವಲೋದ್ಯೋಗಿನೋಽನಿಶಮ್ ॥೬॥**

ಭಗವಂತನ ಭುಜಗಳನ್ನು ನೆನೆಯಬೇಕು. ಅವು ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿವೆ. ಪುಷ್ಟಗಳೂ ವರ್ತುಲಾಕಾರಗಳೂ ಆದ ಆ ಭುಜಗಳಿಗೆ ಸರ್ವದಾ ಜಗವನ್ನು ಸಲಹುವುದೆ ಉದ್ಯೋಗ.

**ಸಂತತಂ ಚಿಂತಯೇತ್ ಕಂಠಂ ಭಾಸ್ವತ್ ಕೌಸ್ತುಭಭಾಸಕಮ್।**
**ವೈಕುಂಠಸ್ಯಾಖಿಲಾ ವೇದಾ ಉದ್ಗೀರ್ಯಂತೇಽನಿಶಂ ಯತಃ ॥೭॥**

ವಿಕುಂಠಾತನಯನೂ ವೈಕುಂಠ ನಿವಾಸಿಯೂ ಆದ ಶ್ರೀಹರಿಯ ಕಂಠವನ್ನು ಸತತ ಚಿಂತಿಸಬೇಕು. ಅದು ಶೋಭಿಸುವ ಕೌಸ್ತುಭವನ್ನೂ ಬೆಳಗಿಸುತ್ತದೆ. ಅದರಿಂದ ಸಕಲವೇದಗಳೂ ನಿರಂತರ ಹೊಮ್ಮುತ್ತಿವೆ.

**ವಿವರಣೆ:**

ಕೇಚಿತ್ ಸ್ವದೇಹಾಂತರ್ಹೃದಯಾವಕಾಶೇ
ಪ್ರಾದೇಶಮಾತ್ರಂ ಪುರುಷಂ ವಸಂತಮ್।
ಚತುರ್ಭುಜಂ ಕಂಜರಥಾಂಗಶಂಖ
ಗದಾಧರಂ ಧಾರಣಯಾ ಸ್ಮರಂತಿ ॥ (ಭಾಗ.)

''ತ್ವತ್ಕಂಠಗಂ ಕೌಸ್ತುಭಮಾಸ ಧಾತಾ'' ಎಂಬ ಭಾಗವತದ ಮಾತಿನಂತೆ 'ಕೌಸ್ತುಭ' ಎಂದರೆ ಬ್ರಹ್ಮಾ. ಅವನಿಗೆ ಜ್ಞಾನೋತ್ಪಾದಕ ಭಗವಂತನ ಕಂಠ-ಎಂದೂ 'ಕೌಸ್ತುಭಭಾಸಕ' ಎಂಬುದರ ಅರ್ಥ.

**ಸ್ಮರೇತ ಯಾಮಿನೀನಾಥ ಸಹಸ್ರಾಮಿತಕಾಂತಿಮತ್।**
**ಭವತಾಪಾಪನೋದೀಡ್ಯಂ ಶ್ರೀಪತೇರ್ಮುಖಪಂಕಜಮ್ ॥ ೮ ॥**

ಶ್ರೀಪತಿಯ ಮುಖಕಮಲವನ್ನು ನೆನೆಯಬೇಕು. ಸಾವಿರಾರು ಚಂದ್ರಮರ ಕಾಂತಿಯನ್ನು ಮೀರಿಸುವುದು ಅದರ ಕಾಂತಿ. ಸಂಸಾರದ ತಾಪಗಳ ಕಳೆವುದು. ಬ್ರಹ್ಮಾದಿ ದೇವತೆಗಳೂ ಅದನ್ನು ತುತಿಸುವರು.

**ಪೂರ್ಣಾನನ್ಯಸುಖೋದ್ಭಾಸಿ ಮಂದಸ್ಮಿತಮಧೀಶಿತುಃ।**
**ಗೋವಿಂದಸ್ಯ ಸದಾ ಚಿಂತ್ಯಂ ನಿತ್ಯಾನಂದಪದಪ್ರದಮ್ ॥ ೯ ॥**

ಪೂರ್ಣವು, ಅಸಾಧಾರಣವೂ ಆದ ಸಂತಸದಿಂದ ಶೋಭಿಸುವ ಜಗದೀಶ ಗೋವಿಂದನ ಮುಗುಳುನಗೆಯನ್ನು ಎಂದೆಂದೂ ಚಿಂತಿಸಬೇಕು. ಅದು ಚಿರಸುಖದ ಮೋಕ್ಷ ಪದವನ್ನು ನೀಡುವುದು.

**ವಿವರಣೆ:**

ಅಹಂ ಕಿಲೇಂದ್ರೋ ದೇವಾನಾಂ ತ್ವಂ ಗವಾಮಿಂದ್ರತಾಂ ಗತಃ।
ಗೋವಿಂದಸ್ತು ತತೋ ದೇವ ಮುನಿಭಿಃ ಕಥ್ಯತೇ ಭವಾನ್ ॥
(-ಹರಿವಂಶ ೨೭-೪೯)

ನಾನು ದೇವತೆಗಳಿಗೆ ಇಂದ್ರ. ನೀನು ಗೋವುಗಳಿಗೆ ಮತ್ತು ವೇದವಾಣಿಗೆ ಇಂದ್ರ. ಆದುದರಿಂದ ಮುನಿಗಳು ನಿನ್ನನ್ನು ಗೋವಿಂದ ಎನ್ನುವರು.

**ಸ್ಮರಾಮಿ ಭವಸಂತಾಪಹಾನಿದಾಮೃತಸಾಗರಮ್।**
**ಪೂರ್ಣಾನಂದಸ್ಯ ರಾಮಸ್ಯ ಸಾನುರಾಗಾವಲೋಕನಮ್ ॥ ೧೦॥**

ಪೂರ್ಣಾನಂದನಾದ ಶ್ರೀರಾಮನ ಒಲವು ತುಂಬಿದ ನೋಟವನ್ನು ನೆನೆಯುವೆನು. ಅದು ಬಾಳ ಬೇಗುದಿಯ ಬೇಗೆಯನು ಕಳೆವ ಸುಧೆಯ ಕಡಲು.

**ವಿವರಣೆ:** ಭವಸಂತಾಪಹಾನಿದಾಮೃತ! ತೇ ಪೂರ್ಣಾನಂದಸ್ಯ ಸಾಗರಂ ಅವಲೋಕನಂ ಸ್ಮರಾಮಿ। ''ಅಮೃತೋ ಧನ್ವಂತರೌ ಸುರೇ'' ಇತಿ ಹೈಮಃ।

ಭವಸಂತಾಪ- ಭವರೋಗಕ್ಕೆ, ಹಾನಿದ - ಪರಿಹರಿಸುವ ವೈದ್ಯನಾದ, ಅಮೃತ- ಧನ್ವಂತರಿಯೇ! ನಿನ್ನ ಪೂರ್ಣಾನಂದದ ಕಡಲಾದ ನೋಟವನ್ನು ನೆನೆಯುವೆನು. ಹೀಗೂ ಅರ್ಥವನ್ನು ಮಾಡಬಹುದು.

**ಧ್ಯಾಯೇದಜಸ್ರಮೀಶಸ್ಯ ಪದ್ಮಜಾದಿಪ್ರತೀಕ್ಷಿತಮ್।**
**ಭ್ರೂಭಂಗಂ ಪಾರಮೇಷ್ಠ್ಯಾದಿ ಪದದಾಯಿವಿಮುಕ್ತಿದಮ್ ॥ ೧೧ ॥**

ಪರಮೇಶನ ಹುಬ್ಬು ಕುಣಿತವನು ನೆನೆಯಬೇಕು. ಅದು ಬ್ರಹ್ಮಾದಿಗಳನ್ನು ಕಾಪಿಡುವುದು ಮತ್ತು ಅವರಿಂದ ಪೂಜ್ಯವು. ಬ್ರಹ್ಮಪದ ಮುಂತಾದ ಸಕಲ ಪದವಿಯನ್ನು ನೀಡುವಂಥದು. ಭಕ್ತಜನರಿಗೆ ಭವದ ಬಿಡುಗಡೆ ಈಯುವುದು.

**ವಿವರಣೆ:** ''ಪ್ರತೀಕ್ಷ್ಯಃ ಪರಿಪಾಲ್ಯೇ ಸ್ಯಾತ್ ಪೂಜ್ಯೇ ಚ'' ಇತಿ ಹೈಮಃ।

ಈ ಕೋಶದಂತೆ ಪ್ರತೀಕ್ಷಿತ = ರಕ್ಷಕ.

**ಸಂತತಂ ಚಿಂತಯೇನಂ ತಮಂತಕಾಲೇ ವಿಶೇಷತಃ।**
**ನೈವೋದಾಪುರ್ಗೃಣಂತೋಽಂತಂ ಯದ್ ಗುಣಾನಾಮಜಾದಯಃ ॥ ೧೨॥**

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ**
**ದ್ವಾದಶಸ್ತೋತ್ರೇ ಪ್ರಥಮೋಽಧ್ಯಾಯಃ॥**

ಸ್ವಾಮಿಯಾದ ಶ್ರೀಹರಿಯನ್ನು ಯಾವಾಗಲೂ ನೆನೆಯುತಿರು. ಮರಣಕಾಲ ದಲ್ಲಿಯಂತು ವಿಶೇಷವಾಗಿ ಚಿಂತಿಸು. ಬ್ರಹ್ಮಾದಿಗಳು ಸತತವಾಗಿ ಸ್ತುತಿಸಿದರೂ ಭಗವಂತನ ಗುಣದ ಕೊನೆ ತಲುಪಿಯೇ ಇಲ್ಲ. ಅದರಿಂದಲೇ ಅವನು ಅನಂತ.

**ವಿವರಣೆ:** 'ಮಹದ್ಗುಣತ್ವಾತ್ ಯಮನಂತಮಾಹುಃ (ಭಾಗ.)

'ಅಂತಕಾಲೇ ವಿಶೇಷತಃ'- ಮರಣಕಾಲದಲ್ಲಿ ವಿಶೇಷವಾಗಿ ಸ್ಮರಣೆ ಬರುವುದಕ್ಕಾಗಿ, 'ಸಂತತಂ ಚಿಂತಯ ಇನಂ 'ಯಾವಾಗಲೂ ಸ್ವಾಮಿಯನ್ನು ನೆನೆಯುತಿರು'.

ಅಹಮನಂತಂ ಸಂತತಂ ಚಿಂತಯೇ. ಅತ ಏವಾಂತಕಾಲೇಽಪಿ ಪ್ರತಿಭಾತ ಪರಾವರಃ ವಿಶೇಷತಃ ಚಿಂತಯೇ. ತ್ವಂ ಚ ಹೇ ಭಕ್ತವರ್ಗ ! ಚಿಂತಯ ಇನಂ ತಮ್। ನಾನು ಸದಾ ಅನಂತನನ್ನು ಚಿಂತಿಸುವೆ. ಆದ್ದರಿಂದಲೇ ಪ್ರಲಯ ಕಾಲದಲ್ಲಿಯೂ ಪರಾವರ ಪ್ರಪಂಚದ ಪ್ರತಿಭಾನವಿರುವ ನಾನು ವಿಶೇಷವಾಗಿ ಚಿಂತಿಸುವೆ. ಭಕ್ತವರ್ಗವೇ ! ನೀನೂ ಆ ಸ್ವಾಮಿಯನ್ನು ನೆನೆ.

**॥ ಇತಿ ಪ್ರಥಮೋಽಧ್ಯಾಯಃ ॥**

# ದ್ವಿತೀಯೋಽಧ್ಯಾಯಃ

**ಸುಜನೋದಧಿ ಸಂವೃದ್ಧಿಪೂರ್ಣಚಂದ್ರೋ ಗುಣಾರ್ಣವಃ।**
**ಅಮಂದಾನಂದಸಾಂದ್ರೋ ನಃ ಪ್ರೀಯತಾಮಿಂದಿರಾಪತಿಃ ॥೧॥**

ಅನಂತಗುಣಸಾಗರನೂ, ತುಂಬು ಸಂತಸ ತುಂಬಿದವನೂ ಆದ ಇಂದಿರಾ ಪತಿಯು ನಮ್ಮಲ್ಲಿ ಒಲವು ತೋರಲಿ. ಅವನು ಜ್ಞಾನಭಕ್ತಿ ವೈರಾಗ್ಯ ಮುಂತಾದ ಗುಣಗಳಿರುವ ಸಜ್ಜನರೆಂಬ ಕಡಲನ್ನು ಉಕ್ಕಿ ಹರಿಯಿಸುವ ಪೂರ್ಣಚಂದ್ರನು.

**ವಿವರಣೆ:** ಹ. ಪಾಠದಲ್ಲಿ ಈ ಸ್ತೋತ್ರವು ದ್ವಾದಶ ಸ್ತೋತ್ರದಲ್ಲಿ ಒಂದಾಗಿ ಸೇರಿಲ್ಲ. ತತ್ವಸಂಖ್ಯಾನದ ಕೊನೆಯಲ್ಲಿ ಲಿಖಿತವಾಗಿದೆ. ('ಸ್ವಜನೋದಧಿ' - ಹ.ಪಾ.)

**ರಮಾಚಕೋರೀವಿಧವೇ ದುಷ್ಟದರ್ಪೋದವಹ್ನಯೇ।**
**ಸತ್ಪಾಂಥಜನಗೇಹಾಯ ನಮೋ ನಾರಾಯಣಾಯ ತೇ ॥೨॥**

ರಮೆ ಎಂಬ ಚಕೋರ ಪಕ್ಷಿಗೆ ಆನಂದ ನೀಡುವ ಪೂರ್ಣಚಂದ್ರ, ದುಷ್ಟ ರಕ್ಕಸರ ಗರ್ವ ಶಮನದಲ್ಲಿ ಕಡಲಕಿಚ್ಚು. ಸಜ್ಜನರೆಂಬ ದಾರಿಹೋಕರಿಗೆ ನೆಮ್ಮದಿ ನೀಡುವ ನಿಲುದಾಣ. ಅಂತಹ ನಾರಾಯಣನೆ, ನಿನಗೆ ನಮಸ್ಕಾರ.

**ವಿವರಣೆ:**

೧. ರಮಾಚಕೋರೀವಿಧು, ೨. ದುಷ್ಟದರ್ಪೋದವಹ್ನಿ, ೩. ಸತ್ಪಾಂಥಜನ ಗೇಹ ಎಂಬ ಮೂರು ವಿಶೇಷಣಗಳೂ ನಾರಾಯಣ ಶಬ್ದದ ಅರ್ಥವನ್ನೇ ಹೇಳುತ್ತಿವೆ-

೧. ನಾರಾ - ರಮೆಗೆ, ಅಯನ - ಆನಂದಾದಿಗಳನ್ನು ಕೊಡುವ ನೆಲೆ.

೨. ನಾರ-ನರಭಕ್ಷಕರಾದ ದುಷ್ಟ ರಕ್ಕಸರಿಗೆ ಅಯನ-ನರಕಾದಿಗಳನ್ನು ಹೊಂದಿಸುವವನು.

೩. ನಾರ-ಮುಕ್ತರಿಗೆ, ಅಯನ-ಆನಂದ ನೀಡುವ ಆಶ್ರಯಧಾಮ.

**ಚಿದಚಿದ್‌ಭೇದಮಖಿಲಂ ವಿಧಾಯಾಽಧಾಯ ಭುಂಜತೇ।**
**ಅವ್ಯಾಕೃತಗೃಹಸ್ಥಾಯ ರಮಾಪ್ರಣಯಿನೇ ನಮಃ ॥೩॥**

ಚೇತನ ಅಚೇತನಾತ್ಮಕವಾದ ಸಕಲ ಪ್ರಪಂಚಕ್ಕೆ ಯಥಾಯೋಗ್ಯವಾಗಿ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುವ, ವಿಕಾರರಹಿತ ಕುಟುಂಬಿಯಾದ ರಮೆಯ ಪ್ರಿಯನಾದ ಶ್ರೀಹರಿಗೆ ನಮಸ್ಕಾರವು.

**ಅಮಂದಗುಣಸಾರೋಽಪಿ ಮಂದಹಾಸೇನ ವೀಕ್ಷಿತಃ।**
**ನಿತ್ಯಮಿಂದಿರಯಾನಂದಸಾಂದ್ರೋ ಯೋ ನೌಮಿ ತಂ ಹರಿಮ್ ॥ ೪ ॥**

ಆನಂದಪೂರ್ಣನು, ಪೂರ್ಣಗುಣಗಳಿಂದ ಶ್ರೇಷ್ಠನಾದರೂ ಶ್ರೀಹರಿಯು ನಿತ್ಯದಲ್ಲಿಯೂ ಮುಗುಳುನಗೆಯಿಂದ ಬೆರೆತ ಕುಡಿನೋಟದಿಂದ ಇಂದಿರೆಯಿಂದ ಭಕ್ತಿಯಿಂದ ಸೇವಿತನಾಗುತ್ತಿರುವನು. ಅಂತಹ ಶ್ರೀಹರಿಯನ್ನು ನಮಿಸುವೆನು.

**ವಿವರಣೆ:** ಇತರ ಜನರು ಲಕ್ಷ್ಮಿಯ ಕಟಾಕ್ಷದಿಂದ ಗುಣಾಢ್ಯರಾದರೆ ಶ್ರೀಹರಿಯು ಗುಣಾಢ್ಯನೇ ಆಗಿದ್ದರೂ ಲಕ್ಷ್ಮಿಯಿಂದ ಮಂದಹಾಸ ಬೆರೆತ ಕಟಾಕ್ಷವೀಕ್ಷಣದ ಮೂಲಕ ಸೇವ್ಯನಾಗಿರುವನು.

**ವಶೀ ವಶೇ ನ ಕಸ್ಯಾಪಿ ಯೋಽಜಿತೋ ವಿಜಿತಾಽಖಿಲಃ।**
**ಸರ್ವಕರ್ತಾ ನ ಕ್ರಿಯತೇ ತನ್ನಮಾಮಿ ರಮಾಪತಿಮ್ ॥ ೫ ॥**

ಎಲ್ಲವೂ ಅವನ ವಶ. ಅವನು ಯಾರ ವಶನೂ ಅಲ್ಲ. ಅವನು ಎಲ್ಲರನ್ನೂ ಗೆದ್ದಿರುವನು. ಯಾರೂ ಅವನನ್ನು ಗೆದ್ದಿಲ್ಲ. ಎಲ್ಲವನ್ನು ಮಾಡಿದವನು ಅವನೆ. ಅವನನ್ನು ಯಾರೂ ಮಾಡಿಲ್ಲ. ಅಂತಹ ರಮಾಪತಿಯನ್ನು ನಮಿಸುತ್ತೇನೆ.

**ವಿವರಣೆ:** 'ವಶೀ ವಶಃ' ಹ್ಯ. ಪಾಠ.

**ಅಗುಣಾಯ ಗುಣೋದ್ರೇಕಸ್ವರೂಪಾಯಾದಿಕಾರಿಣೇ।**
**ವಿದಾರಿತಾರಿಸಂಘಾಯ ವಾಸುದೇವಾಯ ತೇ ನಮಃ ॥ ೬ ॥**

ಪ್ರಾಕೃತಗುಣರಹಿತನು, ಸಕಲಗುಣಾತಿಶಯ ಸ್ವರೂಪನು, ಜಗದಾದಿ ಕಾರಣನು, ಶತ್ರುಸಂಹಾರಕನು, ಇಂತಹ ವಾಸುದೇವ! ನಿನಗೆ ನಮಸ್ಕಾರವು.

**ಆದಿದೇವಾಯ ದೇವಾನಾಂ ಪತಯೇ ಸಾದಿತಾರಯೇ।**
**ಅನಾದ್ಯಜ್ಞಾನಪಾರಾಯ ನಮೋ ವರವರಾಯ ತೇ ॥ ೭ ॥**

ಸೃಷ್ಟಿಯಾಗುವ ಮೊದಲು ಕಡಲಿನಲ್ಲಿ ಯೋಗನಿದ್ರೆಯಿಂದ ನಲಿದವನು, ಸುರರ ಪಾಲಿಸುವವನು, ಅರಿಗಳನ್ನು ತರಿದವನು, ಅನಾದಿಯಾದ

ಅವಿದ್ಯೆಯನ್ನು ಪರಿಹರಿಸುವವನು, ಸರ್ವೋತ್ತಮನು ಆದ ಶ್ರೀಹರಿಗೆ ನಮಸ್ಕಾರವು.

**ವಿವರಣೆ:** 'ನಮಃ ಪಾರಾವರಾಶ್ರಯ' ಹೃ.ಪಾ.

**ಅಜಾಯ ಜನಯಿತ್ರೇಽಸ್ಯ ವಿಜಿತಾಖಿಲದಾನವ।**
**ಅಜಾದಿಪೂಜ್ಯಪಾದಾಯ ನಮಸ್ತೇ ಗರುಡಧ್ವಜ ॥ ೮ ॥**

ಹುಟ್ಟು ಇಲ್ಲದವನು, ಎಲ್ಲದರ ಜನಕನು, ಎಲ್ಲಾ ದಾನವರನ್ನು ಸದೆದವನು, ಬ್ರಹ್ಮಾದಿಗಳಿಂದ ಪೂಜ್ಯಸ್ವರೂಪನು, ಗರುಡಧ್ವಜನು ಆದ ನಿನಗೆ ನಮಸ್ಕಾರವು.

**ವಿವರಣೆ:**

ರಮಾರಮಣ ಏವೈಕೋ ರಣಜಿಚ್ಛರಣಂ ಸತಾಮ್।
ಕಾರಣಂ ಕಾರಣಸ್ಯಾಪಿ ತರುಣಾದಿತ್ಯ ಸಪ್ರಭಃ ॥ (ಹೃ.ಪಾ.)

ಎಲ್ಲ ರಣದಲ್ಲಿ ಗೆಲ್ಲುವ ರಮಾರಮಣನೇ ಸಜ್ಜನರಿಗೆಲ್ಲ ರಕ್ಷಕ. ಅವನು ಕಾರಣಕು ಕಾರಣ. ತರುಣ ರವಿಯ ಕಾಂತಿಯವನು.

**ಇಂದಿರಾಮಂದಸಾಂದ್ರಾಗ್ರ್ಯ ಕಟಾಕ್ಷ ಪ್ರೇಕ್ಷಿತಾತ್ಮನೇ।**
**ಅಸ್ಮದಿಷ್ಟೈಕಕಾರ್ಯಾಯ ಪೂರ್ಣಾಯ ಹರಯೇ ನಮಃ ॥ ೯ ॥**

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ**
**ದ್ವಾದಶಸ್ತೋತ್ರೇ ದ್ವಿತೀಯೋಽಧ್ಯಾಯಃ॥**

ಇಂದಿರೆಯ, ತುಂಬು ಒಲುಮೆಯ ಹೊತ್ತ ಉತ್ತಮವಾದ ಕಡೆಗಣ್ಣನೋಟಕೆ ಪಾತ್ರನು, ನಮ್ಮ ಅಭೀಷ್ಟವನ್ನು ಪೂರೈಸುವುದೇ ಮುಖ್ಯಕಾರ್ಯವಾಗಿರುವವನು, ಇಂತಹ ಪರಿಪೂರ್ಣ ಹರಿಗೆ ನಮಸ್ಕಾರವು.

**ವಿವರಣೆ:**

ಏವಂ ವಿಧಃ ಪರೋ ವಿಷ್ಣುರವ್ಯಾಚ್ಛ್ರೀ ಪುರುಷೋತ್ತಮಃ।
ತಮಹಂ ಸರ್ವದಾ ವಂದೇ ಶ್ರೀನಿಕೇತಂ ಪರಂ ಹರಿಮ್ ॥ (ಹೃ.ಪಾ.)

ಇಂತಹ ಜಗತ್ಪಾಲಕನಾದ ಶ್ರೀಪುರುಷೋತ್ತಮನಾದ ವಿಷ್ಣುವು ಎಲ್ಲರನ್ನು ಕಾಪಾಡಲಿ. ಶ್ರೀನಿಲಯನಾದ ಆ ಸರ್ವೋತ್ತಮನಾದ ಶ್ರೀಹರಿಯನ್ನು ನಾನು ಸರ್ವದಾ ನಮಿಸುತ್ತೇನೆ.

**॥ ಇತಿ ದ್ವಿತೀಯೋಽಧ್ಯಾಯಃ ॥**

# ತೃತೀಯೋಽಧ್ಯಾಯಃ

**ಕುರು ಭುಂಕ್ಷ್ವ ಚ ಕರ್ಮ ನಿಜಂ ನಿಯತಂ ಹರಿಪಾದವಿನಮ್ರಧಿಯಾ ಸತತಮ್।**
**ಹರಿರೇವ ಪರೋ ಹರಿರೇವ ಗುರುರ್ಹರಿರೇವ ಜಗತ್ಪಿತೃಮಾತೃಗತಿಃ ॥ ೧॥**

ಶ್ರೀಹರಿಯ ಪಾದದಲ್ಲಿ ವಿನಮ್ರವಾದ ಬುದ್ಧಿಯುಳ್ಳವನಾಗಿ ಸ್ವವರ್ಣ ಆಶ್ರಮೋಚಿತ ಕರ್ಮಾನುಷ್ಠಾನ ಮಾಡು. ಸ್ವಯೋಗ್ಯವಾದ ಕರ್ಮಫಲವನ್ನು ಅನುಭವಿಸು. ಶ್ರೀಹರಿಯೇ ಸರ್ವೋತ್ತಮನು ಮತ್ತು ಪಾಲಕನು. ಶ್ರೀಹರಿಯೇ ಜ್ಞಾನೋಪದೇಶಕನಾದ ಗುರುವು. ಶ್ರೀಹರಿಯೇ ಜಗತ್ತಿನ ತಾಯಿ, ತಂದೆ, ಆಸರೆ.

**ವಿವರಣೆ:** ಹ್ಯ.ಪಾ. ದಲ್ಲಿ ಇದು ನಾಲ್ಕನೆ ಸ್ತೋತ್ರ. ಮೂರನೆ ಸ್ತೋತ್ರ ಬೇರೆಯೇ ಇದೆ. ಅದನ್ನು ಕೊನೆಯಲ್ಲಿ ಅನುವಾದಿಸಲಾಗಿದೆ.

ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ।
ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥ (ಈ.ಉ.)

ನೂರು ವರ್ಷ ಸಂತಸದ ಬಾಳು ಬಯಸುವವನು ಈ ಕರ್ಮಭೂಮಿಯಲ್ಲಿ, ಸಾಧನ ಶರೀರದಲ್ಲಿ, ಪರಮಾತ್ಮನಲ್ಲಿ ಪೂಜಾರೂಪವಾಗಿ ಕರ್ಮಗಳನ್ನು ಮಾಡಲೇಬೇಕು. ಅಪರೋಕ್ಷ ಜ್ಞಾನಿಗೂ ಕರ್ಮದ ಲೇಪ ಉಂಟು. ಆದ್ದರಿಂದ ಅವನೂ ಕರ್ಮವನ್ನು ಮಾಡಲೇಬೇಕು.

ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ। (ಗೀತಾ)

ಸ್ವವರ್ಣ ಆಶ್ರಮೋಚಿತ ಕರ್ಮಾಚರಣೆಯೇ ಭಗವಂತನ ಆರಾಧನೆ. ಅದರಿಂದಲೇ ಸಿದ್ಧಿ. ಅಪರೋಕ್ಷ ಜ್ಞಾನಕ್ಕಿಂತಲೂ ಮುಂಚೆ ಮಾಡಿದ ಕರ್ಮವು ಅಂತಃಕರಣ ಶುದ್ಧಿಯನ್ನು ಮಾಡುವ ಮೂಲಕ ಮೋಕ್ಷಸಾಧನ. ಅಪರೋಕ್ಷ ಜ್ಞಾನೋತ್ತರ ಮಾಡುವ ಕರ್ಮ ಮೋಕ್ಷದಲ್ಲಿ ಆನಂದಾಭಿವೃದ್ಧಿಗೆ ಸಾಧನ. ಪ್ರಾರಬ್ಧ ಕರ್ಮಕ್ಕಿಂತಲೂ ಬೇರೆಯಾದ ಸಂಚಿತ - ಆಗಾಮಿ ಕರ್ಮಗಳು ಅಪರೋಕ್ಷ ಜ್ಞಾನದಿಂದ ನಾಶವಾಗುತ್ತವೆ. ಪ್ರಾರಬ್ಧ ಕರ್ಮವನ್ನು ಅನುಭವಿಸಲೇ ಬೇಕು - ಅಪರೋಕ್ಷ ಜ್ಞಾನಿಯಾದರೂ.

''ಪ್ರಾರಬ್ಧಕರ್ಮ ತು ಜ್ಞಾನಿಭಿರಪಿ ಅನುಭೋಕ್ತವ್ಯಮೇವ।
ಜ್ಞಾನಿನಾಮಪಿ ಸತಿ ಪ್ರಾರಬ್ಧಕರ್ಮಣಿ ಶರೀರಾಂತರಂ ಯುಕ್ತಂ।
ಸಂತಿ ಬಹುಶರೀರಫಲಾನಿ ಕರ್ಮಾಣಿ ಕಾನಿಚಿತ್'' (ಗೀತಾ ಭಾಷ್ಯ)

ಆದ್ದರಿಂದಲೇ ಆಚಾರ್ಯರು 'ಕುರು-ಭುಂಕ್ಷ್ವ' ಎಂದು ಅನುಶಾಸನ ಮಾಡಿದ್ದಾರೆ.

'ಹರಿಪಾದವಿನಮ್ರಧಿಯಾ ಕುರು.' ಎಲ್ಲಾ ಕರ್ಮಗಳಿಗೂ ಭಗವತ್ಪ್ರಸಾದವೇ ಪ್ರಯೋಜನ, ಮತ್ತು ಎಲ್ಲಾ ಕರ್ಮಗಳನ್ನು ಮಾಡುವವನು, ಮಾಡಿಸುವವನು ಸ್ವತಂತ್ರನಾದ ಭಗವಂತನೇ ಎಂಬ ಬುದ್ಧಿಯಿಂದ ಕರ್ಮವನ್ನು ಆಚರಿಸು.

'ಹರಿಪಾದವಿನಮ್ರಧಿಯಾ ಭುಂಕ್ಷ್ವ' - ಸಕಲಕರ್ಮಫಲಪ್ರದನು ಶ್ರೀಹರಿಯೇ, ಕರ್ಮಫಲವನ್ನು ಉಣ್ಣುವವನು, ಉಣಿಸುವವನು ಶ್ರೀಹರಿಯೇ ಎಂಬ ಬುದ್ಧಿಯಿಂದ ಫಲವನ್ನು ಅನುಭವಿಸು.

ಹರಿಪಾದವಿನಮ್ರಧಿಯಾ - ಹರಿಯ ಮಹಿಮೆಯನ್ನು ತಿಳಿಸುವ ಭಾಗವತಾದಿ ಗ್ರಂಥಗಳೇ ಹರಿಪಾದಗಳು. ಅದರ ಅಧ್ಯಯನ ಶ್ರವಣಾದಿಗಳಿಂದ ವಿನಮ್ರವಾದ ಬುದ್ಧಿಯಿಂದ ಎಂದರ್ಥ.

ಹರಿಮಹಿಮಾಪ್ರತಿಪಾದಕಗಳಾದ ಭಾಗವತಾದಿ ಗ್ರಂಥಗಳನ್ನು ಪಾಠ ಪ್ರವಚನ ಮಾಡುತ್ತಿರುವ ಭಕ್ತರು - 'ಹರಿಪಾದವಿ'ಗಳು. ಅವರಲ್ಲಿ ನಮ್ರವಾದ ಬುದ್ಧಿಯಿಂದ ಎಂದೂ ಅರ್ಥ. (ಹರಿಪಾದವಂ ಏಷು ಅಸ್ತೀತಿ ಹರಿಪಾದವಿನಃ। ವಂ ಶಾಸ್ತ್ರಂ। ಭಗವದ್ಭಕ್ತಾಃ। ತೇಷು ನಮ್ರಧಿಯಾ)

ನಿತ್ಯ, ನೈಮಿತ್ತಿಕ,ಕಾಮ್ಯ ಎಂದು ಕರ್ಮ ಮೂರು ವಿಧ. ಸಾತ್ವಿಕ, ರಾಜಸ, ತಾಮಸ ಎಂದು ಮತ್ತೆ ಮೂರು ವಿಧ. ಪ್ರವೃತ್ತ, ನಿವೃತ್ತ ಎಂದೂ ಮತ್ತೆರಡು ವಿಧ. ಇವುಗಳಲ್ಲಿ ಪ್ರವೃತ್ತ, ಕಾಮ್ಯ, ರಾಜಸ, ತಾಮಸ, ಕರ್ಮಗಳನ್ನು ಬಿಟ್ಟು ನಿವೃತ್ತ - ಸಾತ್ವಿಕ, ನಿತ್ಯ-ನೈಮಿತ್ತಿಕ ಕರ್ಮಗಳನ್ನು ಮಾತ್ರ ಮಾಡು.

ಸರ್ವವೂ ಭಗವಂತನ ಅಧೀನ ಎಂದು ಬಗೆದು ಫಲವನ್ನು ಬಯಸದೆ ಕರ್ತವ್ಯ ಕರ್ಮ ಮಾಡು, ಪ್ರಾರಬ್ಧಕರ್ಮವನ್ನು ಅನುಭವಿಸು ಎಂದು ಆಚಾರ್ಯರು ಉಪದೇಶಿಸುತ್ತಿದ್ದಾರೆ ॥ ೧ ॥

**ನ ತತೋಽಸ್ತ್ಯಪರಂ ಜಗತೀಡ್ಯತಮಂ**
**ಪರಮಾತ್ಪರತಃ ಪುರುಷೋತ್ತಮತಃ।**
**ತದಲಂ ಬಹುಲೋಕವಿಚಿಂತನಯಾ**
**ಪ್ರವಣಂ ಕುರು ಮಾನಸಮೀಶಪದೇ ॥ ೨ ॥**

ಬ್ರಹ್ಮಾದಿಗಳಿಗಿಂತ ಉತ್ತಮಳಾದ ರಮೆಗಿಂತಲೂ ಸರ್ವೋತ್ತಮನಾದ ಪುರುಷೋತ್ತಮನಿಗಿಂತಲೂ ಮತ್ತೊಂದು ಅತ್ಯಂತಸ್ತುತ್ಯವಾದ ವಸ್ತು ಜಗತ್ತಿನಲ್ಲಿ ಇಲ್ಲ. ಆದುದರಿಂದ ಲೋಕದ ಸತಿಸುತ ಧನಕನಕಾದಿಗಳ ವಿಶೇಷವಾದ ಚಿಂತೆ ಸಾಕು. ಸರ್ವನಿಯಾಮಕನಾದ ಪರಮಾತ್ಮನ ಪದತಲದಲ್ಲಿ ಮನಸ್ಸನ್ನು ಆಸಕ್ತಗೊಳಿಸು. ॥ ೩ ॥

**ಯತತೋಽಪಿ ಹರೇಃ ಪದಸಂಸ್ಮರಣೇ**
**ಸಕಲಂ ಹ್ಯಘಮಾಶು ಲಯಂ ವ್ರಜತಿ।**
**ಸ್ಮರತಸ್ತು ವಿಮುಕ್ತಿಪದಂ ಪರಮಂ**
**ಸ್ಫುಟಮೇಷ್ಯತಿ ತತ್ ಕಿಮಪಾಕ್ರಿಯತೇ ॥ ೩ ॥**

ಶ್ರೀಹರಿಯ ಪಾದಸ್ಮರಣೆಗೆ ಪ್ರಯತ್ನ ಮಾಡಿದರೂ ಸಾಕು ಅವನ ಎಲ್ಲಾ ಪಾಪಗಳು ಕ್ಷಣಮಾತ್ರ ನಾಶವಾಗುವವು. ಸ್ಮರಿಸಿದವನಿಗಂತು ಉತ್ತಮವಾದ ಮುಕ್ತಿಯೇ ದೊರಕುವುದು. ಮತ್ತೇಕೆ ಹರಿಸ್ಮರಣೆಯನ್ನು ಬಿಡಬೇಕು?

**ಶೃಣುತಾಮಲಸತ್ಯವಚಃ ಪರಮಂ**
**ಶಪಥೇರಿತಮುಚ್ಛ್ರಿತ ಬಾಹುಯುಗಮ್।**
**ನ ಹರೇಃ ಪರಮೋ ನ ಹರೇಃ ಸದೃಶಃ**
**ಪರಮಃ ಸ ತು ಸರ್ವಚಿದಾತ್ಮಗಣಾತ್ ॥ ೪ ॥**

ನಿರ್ದೋಷರೂ ಗುಣಪೂರ್ಣರೂ ಆದ ವೇದವ್ಯಾಸರು ಎರಡು ತೋಳುಗಳನ್ನೆತ್ತಿ ಶಪಥಪೂರ್ವಕವಾಗಿ ನುಡಿದ ಮಾತನ್ನು ಆಲಿಸಿರಿ - ''ಹರಿಗಿಂತ ಹಿರಿಯನಿಲ್ಲ. ಹರಿಗೆ ಸಮನಿಲ್ಲ. ಅವನೊಬ್ಬನೇ ಎಲ್ಲಾ ಚೇತನಗಣಕ್ಕಿಂತ ಸರ್ವೋತ್ತಮನು.''

**ವಿವರಣೆ:**

ಸತ್ಯಂ ಸತ್ಯಂ ಪುನಃ ಸತ್ಯಂ ಉದ್ಧೃತ್ಯ ಭುಜಮುಚ್ಯತೇ।
ವೇದಶಾಸ್ತ್ರಾತ್ ಪರಂ ನಾಸ್ತಿ ನ ದೈವಂ ಕೇಶವಾತ್ಪರಮ್॥ (ಭಾರತ)

**ಯದಿ ನಾಮ ಪರೋ ನ ಭವೇತ್ಸ ಹರಿಃ**
**ಕಥಮಸ್ಯ ವಶೇ ಜಗದೇತದಭೂತ್।**
**ಯದಿ ನಾಮ ನ ತಸ್ಯ ವಶೇ ಸಕಲಂ**
**ಕಥಮೇವ ತು ನಿತ್ಯಸುಖಂ ನ ಭವೇತ್ ॥ ೫ ॥**

ಶ್ರೀಹರಿಯು ಸರ್ವೋತ್ತಮನಲ್ಲದಿದ್ದರೆ ಈ ಜಗತ್ತು ಅವನ ವಶ ಹೇಗಾದೀತು? ಅವನು ಜಗತ್‌ಸ್ವಾಮಿ ಹೇಗಾದಾನು? ಶ್ರೀಹರಿಯು ಜಗತ್ ಸ್ವಾಮಿಯಾದುದರಿಂದ ಅವನೇ ಸರ್ವೋತ್ತಮನು.

ಇದೆಲ್ಲವೂ ಅವನ ವಶವಲ್ಲದಿದ್ದರೆ ಎಲ್ಲರೂ ಸ್ವತಂತ್ರರೇ ಆಗಿರುತ್ತಿದ್ದರು. ಎಲ್ಲರೂ ಸ್ವತಂತ್ರರೇ ಆಗಿರುತ್ತಿದ್ದರೆ ಏಕೆ ನಿತ್ಯ ಸುಖಿಗಳಾಗಿಲ್ಲ? ಯಾರಿಗೂ ನಿತ್ಯ ಸುಖಾನುಭವವಿಲ್ಲ. ಅಂದ ಬಳಿಕ ಯಾರೂ ಸ್ವತಂತ್ರರು ಅಲ್ಲ. ಅಂದರೆ ಎಲ್ಲವೂ ಭಗವಂತನ ವಶ. ಅವನು ಸರ್ವೋತ್ತಮ ಎಂದು ಸಿದ್ಧವಾಯಿತು. ॥ ೫ ॥

**ವಿವರಣೆ:** 'ಭವೇತ' ಹ್ಯ ಪಾಠ.

**ನ ಚ ಕರ್ಮವಿಮಾಮಲಕಾಲಗುಣ**
**ಪ್ರಭೃತೀಶಮಚಿತ್ತನು ತದ್ಧಿ ಯತಃ।**
**ಚಿದಚಿತ್ತನು ಸರ್ವಮಸೌ ತು ಹರಿಃ**
**ಯಮಯೇದಿತಿ ವೈದಿಕಮಸ್ತಿ ವಚಃ ॥ ೬ ॥**

ಕರ್ಮ, ಅವಿದ್ಯೆ, ರಾಗದ್ವೇಷಾದಿದೋಷ, ಕಾಲ, ಸತ್ತ್ವಾದಿಗುಣತ್ರಯ, ಸ್ವಭಾವ ಮುಂತಾದವು ಜಗತ್ಕಾರಣವಲ್ಲ. ಅವೆಲ್ಲವು ಅಚೇತನವಲ್ಲವೇ? ಚೇತನ ಅಚೇತನಾತ್ಮಕವಾದ ಈ ಎಲ್ಲಾ ವಿಶ್ವವನ್ನು ಪರಮಚೇತನನಾದ ಶ್ರೀಹರಿಯೆ ನಿಯಮಿಸುವನು ಎಂದು ವೇದವಾಣಿ ಇದೆ.

**ವಿವರಣೆ:** ಮೀಮಾಂಸಕರು ಕರ್ಮವೇ ಜಗತ್ಕಾರಣ ಎನ್ನುವರು. ಎಲ್ಲವೂ ಅವಿದ್ಯಾಕಲ್ಪಿತ ಎನ್ನುವ ಮಾಯಾವಾದಿಗಳು ಅವಿದ್ಯೆಯೇ ಜಗತ್ಕಾರಣ ಎನ್ನುವರು. ರಾಗ-ದ್ವೇಷಾದಿದೋಷಗಳೇ ಜಗತ್ಕಾರಣ ಎನ್ನುವರು ಲೋಕಾಯತರು. 'ಸರ್ವಾಧಾರಃ ಕಾಲಃ' ಎನ್ನುವ ನೈಯಾಯಿಕರು ಎಲ್ಲದಕ್ಕೂ ಕಾಲವೇ ಕಾರಣ ಎಂದು ಅಭಿಪ್ರಾಯ ಪಡುವರು. ಸತ್ತ್ವ, ರಜಸ್, ತಮೋಗುಣಾತ್ಮಕವಾದ ಪ್ರಕೃತಿಯೇ ಜಗತ್ಕಾರಣ ಎಂದು ಸಾಂಖ್ಯರು ಹೇಳುವರು.

ಇವರೆಲ್ಲ ಗೀತೆ, ಪುರಾಣಗಳ ವಾಕ್ಯಗಳನ್ನು ತಪ್ಪಾಗಿ ಅರ್ಥೈಸಿಕೊಂಡು ತಮ್ಮ

ತಮ್ಮ ವಾದಗಳನ್ನು ಮಂಡಿಸಿರುವರು. ಆದರೆ ಜಡಗಳಾದ ಈ ಪದಾರ್ಥಗಳಿಗೆ ಚೇತನಾಚೇತನಾತ್ಮಕ ಪ್ರಪಂಚದ ನಿಯಾಮಕತ್ವ ಹೇಗೆ ಹೊಂದುತ್ತದೆ? ಎಂದು ಆಚಾರ್ಯರು ಪ್ರಶ್ನಿಸುವರು.

''ಯಃ ಪೃಥಿವ್ಯಾಂ ತಿಷ್ಠನ್ ಯಸ್ಯ ಪೃಥಿವೀ ಶರೀರಂ ಯಂ ಪೃಥಿವೀ
ನ ವೇದ ಯಃ ಪೃಥಿವೀಮಂತರೋ ಯಮಯತಿ।''
''ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ।
ಯದನುಗ್ರಹತಸ್ಸಂತಿ ನ ಸಂತಿ ಯದುಪೇಕ್ಷಯಾ॥

ಮೇಲಿನ ಪ್ರಮಾಣ ವಾಕ್ಯಗಳು ಚೇತನಾಚೇತನಾತ್ಮಕ ವಸ್ತುಗಳಿಗೆಲ್ಲಾ ಶ್ರೀಹರಿಯೇ ನಿಯಾಮಕ ಎಂದು ತಿಳಿಸುತ್ತಿವೆ. ॥ ೬ ॥

**ವ್ಯವಹಾರಭಿದಾಽಪಿ ಗುರೋರ್ಜಗತಾಂ**
**ನ ತು ಚಿತ್ತಗತಾ ಸ ಹಿ ಚೋದ್ಯಪರಮ್।**
**''ಬಹವಃ ಪುರುಷಾಃ ಪುರುಷಪ್ರವರೋ**
**ಹರಿರಿತ್ಯವದತ್ ಸ್ವಯಮೇವ ಹರಿಃ'' ॥ ೭ ॥**

ಜೀವ ಪರಮಾತ್ಮರ ಭೇದ ವ್ಯಾವಹಾರಿಕವೆಂದು ಜಗದ್ಗುರುಗಳಾದ ವೇದವ್ಯಾಸರ ಆಶಯವಲ್ಲ. ಆ ಹರಿಯು ತಾನೇ ಭಾರತದಲ್ಲಿ ''ಪುರುಷರು ಅನೇಕರೋ? ಒಬ್ಬರೋ? ಅನೇಕರಾದರೆ ಅವರಲ್ಲಿ ಯಾರು ಶ್ರೇಷ್ಠ?'' ಎಂಬ ಜನಮೇಜಯನ ಪ್ರಶ್ನೆಗೆ ''ಚೇತನಗಳು ಅನೇಕ. ಗುಣಪೂರ್ಣನಾದ ಶ್ರೀಹರಿಯೇ ಅವರಲ್ಲಿ ಶ್ರೇಷ್ಠನು'' ಎಂದು ವೈಶಂಪಾಯನರ ಉತ್ತರವನ್ನು ತಿಳಿಸಿರುವನು.

**ವಿವರಣೆ:** ಪರಮಾತ್ಮನಿಗೆ ಮತ್ತು ಜೀವರಿಗೆ ಭೇದವಿಲ್ಲ. ಅಂದ ಮೇಲೆ ನಿಯಮ್ಯ ನಿಯಾಮಕಭಾವ ಎಲ್ಲಿ ಬಂತು? ಪ್ರತ್ಯಕ್ಷವಾಗಿ ಭೇದ ತೋರುತ್ತಿದ್ದರೂ ಅದು ವ್ಯಾವಹಾರಿಕ. ಪಾರಮಾರ್ಥಿಕವಲ್ಲ. ನಾನೇ ಬ್ರಹ್ಮ ಎಂಬ ಸಾಕ್ಷಾತ್ಕಾರವಾದಾಗ ಜೀವ-ಪರಮಾತ್ಮರಿಗೆ ವಾಸ್ತವವಾಗಿ ಭೇದವಿಲ್ಲೆಂದು ತಿಳಿಯುವುದು ಎಂಬ ಮಾಯಾವಾದಿಗಳ ಆಕ್ಷೇಪಕ್ಕೆ ಆಚಾರ್ಯರು ಇಲ್ಲಿ ಉತ್ತರಿಸುತ್ತಿದ್ದಾರೆ.

''ಬಹವಃ ಪುರುಷಾಃ ಬ್ರಹ್ಮನ್ ಉತಾಹೋ ಏಕ ಏವ ತು?
ಕೋ ಹ್ಯತ್ರ ಪುರುಷಶ್ರೇಷ್ಠಸ್ತಂ ಭವಾನ್ ವಕ್ತುಮರ್ಹತಿ॥''

''ನೈತದಿಚ್ಛಂತಿ ಪುರುಷಮೇಕಂ ಕುರುಕುಲೋದ್ಭವ।
ಬಹೂನಾಂ ಪುರುಷಾಣಾಂ ಹಿ ಯಥೈಕಾ ಯೋನಿರುಚ್ಯತೇ।
ತಥಾ ತಂ ಪುರುಷಂ ವಿಶ್ವಮಾಖ್ಯಾಸ್ಯಾಮಿ ಗುಣಾಧಿಕಮ್॥'' (ಭಾರತ)

**ಚತುರಾನನಪೂರ್ವವಿಮುಕ್ತಗಣಾಃ**
**ಹರಿಮೇತ್ಯ ತು ಪೂರ್ವವದೇವ ಸದಾ।**
**ನಿಯತೋಚ್ಚವಿನೀಚತಯೈವ ನಿಜಾಂ**
**ಸ್ಥಿತಿಮಾಪುರಿತಿ ಸ್ಮ ಪರಂ ವಚನಮ್ ॥ ೮ ॥**

ಬ್ರಹ್ಮದೇವರೆ ಮೊದಲಾದ ವಿಮುಕ್ತರಾದ ದೇವತೆಗಳು ಮೋಕ್ಷಕ್ಕೆ ಬರುವ ಮುಂಚೆ ಸಂಸಾರದಲ್ಲಿ ಹೇಗೆ ಪರಮಾತ್ಮನಿಂದ ಭಿನ್ನರಾಗಿಯೂ ತಾರತಮ್ಯ ವಿಶಿಷ್ಟರಾಗಿಯೂ ಇರುವರೋ ಅದೇ ರೀತಿ ಮೋಕ್ಷದಲ್ಲಿಯೂ ಭಗವಂತನಿಂದ ಭಿನ್ನರಾಗಿಯೇ ತಾರತಮ್ಯ ವಿಶಿಷ್ಟರಾಗಿಯೇ ಪರಮಾತ್ಮನನ್ನು ಹೊಂದಿ ಆನಂದವನ್ನು ಅನುಭವಿಸುವರೆಂಬ ಉತ್ತಮಪ್ರಮಾಣವಚನವಿದೆ.

**ವಿವರಣೆ:**

ಮುಕ್ತಾಃ ಪ್ರಾಪ್ಯ ಪರಂ ವಿಷ್ಣುಂ ತದ್ದೇಹಂ ಸಂಶ್ರಿತಾ ಅಪಿ।
ತಾರತಮ್ಯೇನ ತಿಷ್ಠಂತಿ ಗುಣೈರಾನಂದಪೂರ್ವಕೈಃ॥
ಭೂಪಾ ಮನುಷ್ಯಗಂಧರ್ವಾ ದೇವಾಃ ಪಿತರ ಏವ ಚ।
ಆಜಾನೇಯಾಃ ಕರ್ಮದೇವಾಃ ತತ್ವದೇವಾಃ ಪುರಂದರಃ॥
ಶಿವೋ ವಿರಿಂಚ ಇತ್ಯೇತೇ ಕ್ರಮಾತ್ ಶತಗುಣೋತ್ತರಾಃ
ನ ಸಮೋ ಬ್ರಹ್ಮಣಃ ಕಶ್ಚಿತ್ ಮುಕ್ತಾವಪಿ ಕಥಂಚನ।
ತತಃ ಸಹಸ್ರಗುಣಿತಾ ಶ್ರೀಃ ತತಃ ಪರಮೋ ಹರಿಃ।
ಅನಂತಗುಣಿತತ್ವೇನ ತತ್ಸಮಃ ಪರಮೋಽಪಿ ನ॥
(ಗೀತಾ ತಾತ್ಪರ್ಯ ಅ೨, ಶ್ಲೋಕ. ೧೮)

ಮುಕ್ತರು ಸರ್ವೋತ್ತಮನಾದ ವಿಷ್ಣುವನ್ನು ಹೊಂದಿ ಅವನ ದೇಹವನ್ನು ಆಶ್ರಯಿಸಿಕೊಂಡಿದ್ದರೂ ಆನಂದಾದಿ ಗುಣಗಳಲ್ಲಿ ತಾರತಮ್ಯ ವುಳ್ಳವರಾಗಿರುವರು.

ರಾಜರು, ಮನುಷ್ಯಗಂಧರ್ವರು, ದೇವಗಂಧರ್ವರು, ಪಿತೃದೇವತೆಗಳು, ಆಜಾನಜ ದೇವತೆಗಳು, ಕರ್ಮದೇವತೆಗಳು, ತತ್ವಾಭಿಮಾನಿಗಳಾದ ಬೃಹಸ್ಪತಿ

ಮೊದಲಾದವರು, ದೇವೇಂದ್ರ, ರುದ್ರ, ಚತುರ್ಮುಖ ಬ್ರಹ್ಮ ಇವರು ಮೋಕ್ಷದಲ್ಲಿಯೂ ಕ್ರಮವಾಗಿ ನೂರು ಪಾಲಿನಷ್ಟು ಹೆಚ್ಚು ಶ್ರೇಷ್ಠರು.

ಇವರಿಗಿಂತ ಬೇರೆಯಾದ ಮನುಷ್ಯೋತ್ತಮರು ರಾಜರಿಗಿಂತ ನೂರು ಪಾಲು ಕಡಿಮೆಯವರು. ಮೋಕ್ಷದಲ್ಲಿಯೂ ಚತುರ್ಮುಖ ಬ್ರಹ್ಮದೇವರಿಗೆ ಸಮರು ಯಾರೂ ಇಲ್ಲ. ಚತುರ್ಮುಖ ಬ್ರಹ್ಮನಿಗಿಂತ ಸಹಸ್ರಪಾಲು ಹೆಚ್ಚಿನವಳು ಲಕ್ಷ್ಮೀದೇವಿಯು, ಲಕ್ಷ್ಮೀದೇವಿಗಿಂತ ಸರ್ವೋತ್ತಮನಾದ ಶ್ರೀಹರಿಯು ಅನಂತಾನಂತ ಪಾಲಿನಷ್ಟು ಹೆಚ್ಚು ಶ್ರೇಷ್ಠನು. ಶ್ರೀಹರಿಗೆ ಸಮರಾಗಲಿ, ಅವನಿಗಿಂತ ಶ್ರೇಷ್ಠರಾಗಲಿ ಯಾರೂ ಇಲ್ಲ.

ಹೀಗೆ ಈ ಪ್ರಮಾಣವಚನ ಮೋಕ್ಷದಲ್ಲಿಯೂ ಜೀವ-ಪರಮಾತ್ಮರಿಗೆ ಭೇದ, ತಾರತಮ್ಯಗಳಿವೆಯೆಂದು ತಿಳಿಸುತ್ತಿದೆ.

ಮೋಕ್ಷದಲ್ಲಿಯೂ ಸಂಸಾರದಲ್ಲಿರುವಂತೆ ಬ್ರಹ್ಮಾದಿ ದೇವತೆಗಳಿಗೆ ಮತ್ತು ಭಗವಂತನಿಗೆ ತಾರತಮ್ಯವಿರುವುದರಿಂದ ಪಾರಮಾರ್ಥಿಕವಾದ ಭೇದವಿದೆ ಯೆಂದು ಸಿದ್ಧವಾಗುವುದು.

**ಆನಂದತೀರ್ಥಸನ್ನಾಮ್ನಾ ಪೂರ್ಣಪ್ರಜ್ಞಾಭಿಧಾಯುಜಾ।**
**ಕೃತಂ ಹರ್ಯಷ್ಟಕಂ ಭಕ್ತ್ಯಾ ಪಠತಃ ಪ್ರೀಯತೇ ಹರಿಃ ॥೮॥**

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ**
**ದ್ವಾದಶಸ್ತೋತ್ರೇ ತೃತೀಯೋಽಧ್ಯಾಯಃ॥**

ಪೂರ್ಣಪ್ರಜ್ಞ ಎಂದುಹೆಸರು ಪಡೆದ, ಆನಂದತೀರ್ಥ ಎಂಬ ಶುಭನಾಮ ವುಳ್ಳವರಿಂದ ರಚಿತವಾದ ಹರಿಸ್ತೋತ್ರ ರೂಪವಾದ ಈ ಎಂಟು ಪದ್ಯಗಳನ್ನು ಭಕ್ತಿಯಿಂದ ಪಠಿಸಿದವನಿಗೆ ಶ್ರೀಹರಿಯು ಪ್ರೀತನಾಗುವನು.

**ವಿವರಣೆ:** ಹ್ಯಪಾ.ದಲ್ಲಿ ಇಲ್ಲಿಗೆ ಸ್ತೋತ್ರ ಸಮಾಪ್ತಿಯಾಗುವುದಿಲ್ಲ. ನಾಲ್ಕನೆ ಅಧ್ಯಾಯದ ''ಸ್ಮರಣೇ ಹಿ...'' ಎಂಬ ನಾಲ್ಕನೆ ಶ್ಲೋಕದಿಂದ ಏಳನೇ ಶ್ಲೋಕದವರೆಗಿನ ಶ್ಲೋಕಗಳಿದ್ದು ಬಳಿಕ ಪ್ರ.ಪಾಠದ ೧, ೨, ೩ನೆ ಶ್ಲೋಕಗಳು ಇವೆ.

**॥ ಇತಿ ತೃತೀಯೋಽಧ್ಯಾಯಃ ॥**

# ಚತುರ್ಥೋಽಧ್ಯಾಯಃ

**ನಿಜಪೂರ್ಣ ಸುಖಾಮಿತಬೋಧತನುಃ**
**ಪರಶಕ್ತಿರನಂತಗುಣಃ ಪರಮಃ।**
**ಅಜರಾಮರಣಃ ಸಕಲಾರ್ತಿಹರಃ**
**ಕಮಲಾಪತಿರೀಡ್ಯತಮೋಽವತು ನಃ ॥೧॥**

ಸ್ವಾಭಾವಿಕಗಳಾದ ತುಂಬು ಸಂತಸ, ಮಿತಿ ಇರದ ತಿಳಿವೆ ಮೈವೆತ್ತವನು, ವಿಲಕ್ಷಣವೂ, ಉತ್ತಮವೂ ಆದ ಸಾಮರ್ಥ್ಯವುಳ್ಳವನು, ಅನಂತಗುಣಪೂರ್ಣನು, ಸರ್ವೋತ್ತಮನು, ಮುಪ್ಪು ಸಾವಿರದವನು, ಎಲ್ಲರ ದುಃಖ ಪರಿಹಾರಕನು, ಅತ್ಯಂತ ಸ್ತುತ್ಯನು ಆದ ಲಕ್ಷ್ಮೀಪತಿಯು ನಮ್ಮನ್ನು ಕಾಪಾಡಲಿ.

**ವಿವರಣೆ:**

ಸದ್ದೇಹಸ್ಸುಖಗಂಧಶ್ಚ ಜ್ಞಾನಭಾಸ್ಸತ್ಪರಾಕ್ರಮಃ।
ಜ್ಞಾನಜ್ಞಾನಸ್ಸುಖಸುಖಃ ಸ ವಿಷ್ಣುಃ ಪರಮೋಽಕ್ಷರಃ॥
ವಿಜ್ಞಾನಮಾನಂದಂ ಬ್ರಹ್ಮ॥ ಆನಂದಂ ಬ್ರಹ್ಮಣೋ ರೂಪಮ್॥
ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ ॥
ವಿಚಿತ್ರಶಕ್ತಿಃ ಪುರುಷಃ ಪುರಾಣೋ ನ ಚಾನ್ಯೇಷಾಂ ಶಕ್ತಯಸ್ತಾದೃಶಾಃ ಸ್ಯುಃ॥
ಏಷ ತ ಆತ್ಮಾ ಸರ್ವಾಂತರೋ ಯೋಽಶನಾಯಾಪಿಪಾಸೇ
ಶೋಕಂ ಮೋಹಂ ಜರಾಂ ಮೃತ್ಯುಮತ್ಯೇತಿ॥

-ಆಚಾರ್ಯರು ಈ ಶ್ಲೋಕದಲ್ಲಿ ತಿಳಿಸಿದ ಮಹಿಮೆಗಳು ಮೇಲಿನ ಉಪನಿಷತ್ತು ಮುಂತಾದ ಪ್ರಮಾಣವಚನಗಳಲ್ಲಿ ಪ್ರತಿಪಾದ್ಯವಾಗಿವೆ.

**ಯದಸುಪ್ತಿಗತೋಽಪಿ ಹರಿಸ್ಸುಖವಾನ್**
**ಸುಖರೂಪಿಣಮಾಹುರತೋ ನಿಗಮಾಃ।**
**ಸ್ವಮತಿಪ್ರಭವಂ ಜಗದಸ್ಯ ಯತಃ**
**ಪರಬೋಧತನುಂ ಚ ತತಃ ಖಪತಿಮ್ ॥೨॥**

ಜೀವರಿಗೆ ಸುಷುಪ್ತಿಯಲ್ಲಿ ಸುಖಾನುಭವವಾದರೆ ಭಗವಂತನು ಸುಷುಪ್ತಿ

ಯಿಲ್ಲದಿದ್ದರೂ ಸುಖವಾಗಿರುವನು. ಆದ್ದರಿಂದಲೇ ಅವನು ಸುಖರೂಪಿ ಎಂದು ವೇದಗಳು ಸಾರುತ್ತಿವೆ. ಈ ಜಗತ್ತೆಲ್ಲವು ಶ್ರೀಹರಿಯ ಬುದ್ಧಿಯಿಂದಲೆ, ಇಚ್ಛೆಯಿಂದಲೆ ಸೃಷ್ಟ್ಯಾದಿಗಳನ್ನು ಹೊಂದಿರುವುದು. ಆದುದರಿಂದ ಹರಿಯು ಇಂದ್ರಿಯನಿಯಾಮಕನು, ಉತ್ಕೃಷ್ಟ ಜ್ಞಾನವೇ ಮೈತಾಳಿದವನು - ಎಂದು ವೇದಗಳು ಉಸುರುತ್ತಿವೆ.

ವಿವರಣೆ: 'ಯದಸುಪ್ತಿಗತೋ ವರಿನಃ' ಹೃ.ಪಾ. ''ವರಿತಿಜ್ಞಾನಮುಚ್ಯತೇ'' ''ಸುಃ ಸುಬಲರೂಪತ್ವಾತ್ ॥'' ''ಪೂರ್ಣೋರ್ಭೂತಿವರೋಽನಂತಸುಖಃ'' ಇತ್ಯಾದಿ ಪ್ರಮಾಣಗಳಂತೆ ವರ್ ಎಂದರೆ ಜ್ಞಾನ, ಬಲ, ಸುಖ ಅವುಗಳಿಗೆ 'ಇನ'' ಸ್ವಾಮಿ (ಬ.ಗೋ)

ಜಾಗ್ರದಾದ್ಯಾಃ ಕರ್ಮ ಚೈವ ಸುಖದುಃಖೇ ಚ ತಸ್ಯ ಹಿ।
ಜಾಗ್ರದಾದೇಃ ಪರೋ ದ್ರಷ್ಟಾ ಸುಖನಿತ್ಯೋ ಹರಿಃ ಸ್ಮೃತಃ॥
(ಭಾಗವತ ತಾತ್ಪರ್ಯ ಸ್ಕ ೭. ಅ-೭ ಶ್ಲೋ. ೨೫)

ಜಾಗರಣ, ಸ್ವಪ್ನ, ಸುಷುಪ್ತಿ ಈ ಅವಸ್ಥೆಗಳು, ಆ ಅವಸ್ಥೆಗಳಲ್ಲಿ ಮಾಡುವ ಕರ್ಮ, ತನ್ನಿಮಿತ್ತವಾದ ಸುಖ, ದುಃಖಗಳು ಎಲ್ಲ ಜೀವನಿಗೇ. ಜೀವನಿಗಿಂತ ಭಿನ್ನನೂ ಸರ್ವೋತ್ತಮನೂ ನಿತ್ಯಸುಖರೂಪಿಯೂ ಆದ ಭಗವಂತ ಆ ಅವಸ್ಥೆಗಳ ಪ್ರೇರಕ, ಅನುಭಾವಕ. 'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ' (ಮುಂಡಕೋಪನಿಷತ್)

**ಬಹುಚಿತ್ರಜಗದ್ಬಹುಧಾಕರಣಾತ್**
**ಪರಶಕ್ತಿರನಂತಗುಣಃ ಪರಮಃ।**
**ಸುಖರೂಪಮಮುಷ್ಯ ಪದಂ ಪರಮಂ**
**ಸ್ಮರತಸ್ತು ಭವಿಷ್ಯತಿ ತತ್ಸತತಮ್ ॥ ೩॥**

ಬಹಳ ಅದ್ಭುತವಾದ ಈ ಪ್ರಪಂಚವನ್ನು ಪರಿಪರಿಯಾಗಿ ಸೃಷ್ಟಿ ಮಾಡಿರುವುದರಿಂದ ಆ ಭಗವಂತನು ವಿಲಕ್ಷಣಶಕ್ತಿಶಾಲಿಯು, ಅನಂತಗುಣ ಪೂರ್ಣನು ಮತ್ತು ಸರ್ವೋತ್ತಮನು. ಅವನ ಉತ್ತಮವಾದ ಸುಖಸ್ವರೂಪವನ್ನು ಧ್ಯಾನ ಮಾಡಿದವನಿಗೆ ಸುಖದ ನೆಲೆಯಾದ ಮೋಕ್ಷ ಸದಾ ದೊರೆಯುವುದು.

**ಸ್ಮರಣೇ ಹಿ ಪರೇಶಿತುರಸ್ಯ ವಿಭೋಃ**
**ಮಲಿನಾನಿ ಮನಾಂಸಿ ಕುತಃ ಕರಣಮ್।**
**ವಿಮಲಂ ಹಿ ಪದಂ ಪರಮಂ ಸ್ವರತಂ**
**ತರುಣಾರ್ಕಸವರ್ಣಮಜಸ್ಯ ಹರೇಃ ॥ ೪ ॥**

ಉತ್ತಮನು, ಸರ್ವನಿಯಾಮಕನು, ವ್ಯಾಪ್ತನೂ ಆದ ವಿಷ್ಣುವಿನ ಸ್ಮರಣೆ ಮಾಡಿದರೆ ಮನಸ್ಸು ಮತ್ತು ಇಂದ್ರಿಯಗಳು ಕಲುಷಿತವಾಗಲು ಹೇಗೆ ಸಾಧ್ಯ? ಮಲಿನವಾದ ಮನಸ್ಸು ಅವನ ಸ್ಮರಣೆಗೆ ಹೇಗೆ ಸಾಧನವಾಗುವುದು? ಹುಟ್ಟು ಸಾವಿರದ ಶ್ರೀಹರಿಯ, ಎಳೆರವಿಯ ಪರಿಯಾದ ಸ್ವರೂಪವು ಸ್ವರಮಣವು, ನಿರ್ಮಲವು ತಾನೆ.

**ವಿವರಣೆ:**

ಶ್ರುಣ್ವತಾಂ ಸ್ವಕಥಾಂ ಕೃಷ್ಣಃ ಪುಣ್ಯಶ್ರವಣಕೀರ್ತನಃ।
ಹೃದ್ಯಂತಸ್ಥೋ ಹ್ಯಭದ್ರಾಣಿ ವಿಧುನೋತಿ ಸುಹೃತ್ಸತಾಮ್॥
ನಷ್ಟಪ್ರಾಯೇಷ್ವಭದ್ರೇಷು ನಿತ್ಯಂ ಭಾಗವತಸೇವಯಾ।
ಭಗವತ್ಯುತ್ತಮಶ್ಲೋಕೇ ಭಕ್ತಿರ್ಭವತಿ ನೈಷ್ಠಿಕೀ॥
ತದಾ ರಜಸ್ತಮೋಭಾವಾಃ ಕಾಮಲೋಭಾದಯಶ್ಚ ಯೇ।
ಚೇತ ಏತೈರನಾವಿದ್ಧಂ ಸ್ಥಿತಂ ಸತ್ವೇ ಪ್ರಸೀದತಿ॥
ಏವಂ ಪ್ರಸನ್ನಮನಸೋ ಭಗವದ್ಭಕ್ತಿಯೋಗತಃ।
ಭಗವತ್ತತ್ವವಿಜ್ಞಾನಂ ಮುಕ್ತಸಂಗಸ್ಯ ಜಾಯತೇ॥
ಭಿದ್ಯತೇ ಹೃದಯಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ।
ಕ್ಷೀಯಂತೆ ಚಾಸ್ಯ ಕರ್ಮಾಣಿ ದೃಷ್ಟ ಏವಾತ್ಮನೀಶ್ವರೇ॥
(ಭಾಗ. ಸ್ಕಂ. ೧-೩-೧೭-೨೧ರವರೆಗೆ)

ತನ್ನ ನಾಮ ಶ್ರವಣ ಕೀರ್ತನಗಳಿಂದ ಪುಣ್ಯವುಂಟುಮಾಡುವ ಕೃಷ್ಣನು ತನ್ನ ಕಥೆಯನ್ನು ಕೇಳುವವರ ಹೃದಯವನ್ನು ಪ್ರವೇಶಿಸುವನು. ಹೃದಯದಲ್ಲಿ ನೆಲೆ ನಿಂತ ಶ್ರೀಹರಿ ಅಲ್ಲಿರುವ ಅಮಂಗಲವನ್ನು ಪರಿಹರಿಸುತ್ತಾನೆ. ಅಮಂಗಲವು ನಷ್ಟವಾಗಲು ನಿತ್ಯದಲ್ಲಿ ಭಗವದ್ಭಕ್ತರ ಸೇವನೆಯಿಂದ ನೈಷ್ಠಿಕವಾದ ಭಗವದ್ಭಕ್ತಿ ಉದಯವಾಗುತ್ತದೆ. ಆಗ ರಜಸ್ತಮೋಗುಣಗಳಿಂದ ಜನ್ಯವಾದ ಕಾಮ ಲೋಭಾದಿಗಳಿಂದ ಮುಕ್ತವಾದ ಮನಸ್ಸು ಭಗವಂತನಲ್ಲಿ ನೆಲೆಸಿ ಪ್ರಸನ್ನ

ವಾಗುತ್ತದೆ. ಪ್ರಸನ್ನ ಮನಸ್ಸಿನ ವಿಷಯಸಂಗರಹಿತನಾದ ಸಾಧಕನಿಗೆ ಭಕ್ತಿಯೋಗದಿಂದ ಭಗವಂತನ ಸಾಕ್ಷಾತ್ಕಾರವಾಗುವುದು. ಭಗವದ್ದರ್ಶನವಾದೊಡನೆ ಮೋಹದ ಬಂಧನ ಕಳಚಿ ಎಲ್ಲ ಸಂಶಯಗಳು ಛಿನ್ನವಾಗುತ್ತವೆ. ಕರ್ಮಪಾಶ ಕ್ಷಯಿಸುವುದು. ಮುಂದೆ ಮುಕ್ತಿಯು ಅವನ ಕೈ ವಶ.

**ವಿಮಲೈಃ ಶ್ರುತಿಶಾಣನಿಶಾತತಮೈಃ**
**ಸುಮನೋಽಸಿಭಿರಾಶು ನಿಹತ್ಯ ದೃಢಮ್।**
**ಬಲಿನಂ ನಿಜವೈರಿಣಮಾತ್ಮತಮೋಽ-**
**ಭಿದಮೀಶಮನಂತಮುಪಾಸ್ವ ಹರಿಮ್ ॥ ೫ ॥**

ವೇದವೆಂಬ ಸಾಣೆಯಲ್ಲಿ ತಿಕ್ಕಿ ತೀಡಿ ಹರಿತಗೊಂಡ ಸಾತ್ವಿಕ ಮನಸ್ಸೆಂಬ ಖಡ್ಗಗಳಿಂದ ಬಲಿಷ್ಠವು, ಸಹಜ ವೈರಿಯೂ ಆದ ಕಾಮ ಕ್ರೋಧಾದಿ ಶತ್ರುವನ್ನು ತರಿದು ಜೀವನಿಗೆ ಆವರಕವಾದ ಅವಿದ್ಯೆಯನ್ನು ಪರಿಹರಿಸುವ ಅಳಿವಿರದ ಹರಿಯನ್ನು ಸೇವಿಸಿರಿ.

**ವಿವರಣೆ:** 'ಉಪೇತ' ಹ್ಯ.ಪಾ.

**ಸ ಹಿ ವಿಶ್ವಸೃಜೋ ವಿಭುಶಂಭುಪುರಂ-**
**ದರ ಸೂರ್ಯಮುಖಾನಪರಾನಮರಾನ್।**
**ಸೃಜತೀಡ್ಯತಮೋಽವತಿ ಹಂತಿ ನಿಜಂ**
**ಪದಮಾಪಯತಿ ಪ್ರಣತಾನ್ಸುಧಿಯಾ ॥ ೬ ॥**

ಅತ್ಯಂತ ಸ್ತುತ್ಯನಾದ ಆ ಶ್ರೀಹರಿಯು ಜಗತ್ತಿನ ಸೃಷ್ಟಿಗೆ ನಿಮಿತ್ತರಾದ ಬ್ರಹ್ಮ, ರುದ್ರ, ಇಂದ್ರ, ಸೂರ್ಯ ಮೊದಲಾದ ತರತಮಭಾವ ಹೊಂದಿದ ದೇವತೆಗಳನ್ನು ಸೃಷ್ಟಿ ಮಾಡುತ್ತಾನೆ. ರಕ್ಷಣೆ ಮಾಡುತ್ತಾನೆ. ಸಂಹಾರ ಮಾಡುತ್ತಾನೆ. ಭಕ್ತಿಯಿಂದ ಪದಕೆರಗಿದವರಿಗೆ ತನ್ನ ಪದವನ್ನು ಹೊಂದಿಸುತ್ತಾನೆ.

**ವಿವರಣೆ:** ''ಅಪರಾನಪರಾನ್, ಪ್ರಣತಾನ್ ಸ್ವಧಿಯಾ'' ಹ್ಯ.ಪಾ.

**ಪರಮೋಽಪಿ ರಮೇಶಿತುರಸ್ಯ ಸಮೋ**
**ನ ಹಿ ಕಶ್ಚಿದಭೂನ್ನ ಭವಿಷ್ಯತಿ ಚ।**
**ಕ್ವಚಿದದ್ಯತನೋಽಪಿ ನ ಪೂರ್ಣಸದಾಽ-**
**ಗಣಿತೇಡ್ಯ ಗುಣಾಮಭವೈಕತನೋಃ ॥ ೭ ॥**

ಪರಿಪೂರ್ಣವು, ನಿರ್ದುಷ್ಟವು, ಅಸಂಖ್ಯವಾದ ಸ್ತುತ್ಯಗಳಾದ ಆನಂದಾದಿ ಗುಣ, ಜ್ಞಾನಗಳೇ ಮುಖ್ಯ ಶರೀರವಾಗಿರುವ ಶ್ರೀಹರಿಗೆ ಉತ್ತಮನು ಅಥವಾ ಸಮನು ಹಿಂದೆ ಇರಲಿಲ್ಲ. ಮುಂದೆ ಇರುವುದಿಲ್ಲ. ಇಂದೂ ಇಲ್ಲ.

ಇತಿ ದೇವವರಸ್ಯ ಹರೇಃ ಸ್ತವನಂ
ಕೃತವಾನ್ಮುನಿರುತ್ತಮಮಾದರತಃ।
ಸುಖತೀರ್ಥಪದಾಭಿಹಿತಃ ಪಠತಃ
ತದಿದಂ ಭವತಿ ಧ್ರುವಮುಚ್ಚಸುಖಮ್ ॥ ೮ ॥

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ
ದ್ವಾದಶಸ್ತೋತ್ರೇ ಚತುರ್ಥೋಽಧ್ಯಾಯಃ॥

ಆನಂದತೀರ್ಥರೆಂಬ ಹೆಸರಿನ ಮುನಿಗಳು ಹೀಗೆ ದೇವೋತ್ತಮನಾದ ಶ್ರೀಹರಿಯ ಉತ್ತಮ ಸ್ತೋತ್ರವನ್ನು ಮಾಡಿರುವರು. ಇದನ್ನು ಭಕ್ತಿಯಿಂದ ಪಠಿಸಿದವನಿಗೆ ಶಾಶ್ವತವಾದ ಸ್ವರೂಪಾನಂದಾವಿರ್ಭಾವರೂಪವಾದ ಶ್ರೇಷ್ಠ ಮೋಕ್ಷ ಸುಖವು ಪ್ರಾಪ್ತವಾಗುವುದು.

॥ ಇತಿ ಚತುರ್ಥೋಽಧ್ಯಾಯಃ ॥

# ಪಂಚಮೋಽಧ್ಯಾಯಃ

**ವಾಸುದೇವಾಪರಿಮೇಯ ಸುಧಾಮನ್**
**ಶುದ್ಧ ಸದೋದಿತ ಸುಂದರಿಕಾಂತ।**
**ಧರಾಧರಧಾರಿಣ ವೇಧುರಧರ್ತಃ**
**ಸೌಧೃತಿದೀಧಿತಿವೇಧೃ ವಿಧಾತಃ।**
**ಅಧಿಕಬಂಧಂ ರಂಧಯ ಬೋಧಾತ್**
**ಛಿಂಧಿ ಪಿ(ವಿ)ಧಾನಂ ಬಂಧುರಮದ್ಧಾ ॥೧॥**

ಎಲ್ಲೆಡೆ ವಾಸಿಸುವ ಎಲ್ಲವನ್ನು ತನ್ನಲ್ಲಿರಿಸಿಕೊಂಡಿರುವ, ಸೃಷ್ಟಿ ಮೊದಲಾದ ಕ್ರೀಡಾರೂಪನೆ ! ಯಾರ ತಿಳಿವಿಗೂ ಪೂರ್ಣವಾಗಿ ಗೋಚರನಾಗದಿರುವವನೆ! ವೈಕುಂಠಾದಿ ಮಂದಿರವುಳ್ಳವನೆ ! ಪರಿಶುದ್ಧನೆ ! ಸಜ್ಜನರಿಂದ ಸರ್ವೋತ್ತಮನೆಂದು ತಿಳಿಯಲ್ಪಡುವವನೆ ! ಲಕ್ಷ್ಮೀಪತಿಯೆ ! ವರಾಹರೂಪದಿಂದ ಭೂಮಿಯನ್ನು ಹೊತ್ತವನೆ ! ಮೇರು ಗೋವರ್ಧನ ಮೊದಲಾದ ಪರ್ವತಗಳನ್ನು ಹೊತ್ತವನೆ ! ಅಸುರರನ್ನು ತರಿದವನೆ ! ಜಗದ್ಧಾರಕನೆ ! ಸದಾ ತೇಜಸ್ವಿಗಳಾದ ರುದ್ರಾದಿಗಳನ್ನು ಸೃಜಿಸುವ ಬ್ರಹ್ಮದೇವರ ಸ್ರಷ್ಟಾರನೆ ! ಸರ್ವೋತ್ತಮನೆ ! ಅಪರೋಕ್ಷಜ್ಞಾನವನ್ನು ಕೊಟ್ಟು ಸಂಸಾರಬಂಧವನ್ನು ಚೆನ್ನಾಗಿ ಭಸ್ಮಗೊಳಿಸು. ನಮ್ಮನ್ನು ಮುಚ್ಚಿರುವ ಅವಿದ್ಯೆ ಎಂಬ ಮುಸುಕನ್ನು ನಾಶಮಾಡು.

**ವಿವರಣೆ:** ಹ.ಪಾ.ದಲ್ಲಿ ಇದು ಒಂಬತ್ತನೆ ಸ್ತೋತ್ರ. ಈ ಮೊದಲ ಪದ್ಯ ಹ.ಪಾ.ದಲ್ಲಿ ಇಲ್ಲ. ೧) ವಾಸುದೇವ - ''ವಾನಾತ್ಸೂತೇರ್ದೇವನಾದ್ವಾಸುದೇವಃ'' - ಸೌಕರಾಯಣಶ್ರುತಿ. ವಾತಿ - ಜಾನಾತೀತಿ ವಾಃ ಸೂತೇ - ಉತ್ಪಾದಯತೀತಿ ಸುಃ। ದೀವ್ಯತಿ - ಕ್ರೀಡತೇ ಇತಿ ದೇವಃ (ಕರ್ಮನಿರ್ಣಯ) ವಾಶ್ಚಾಸೌ ಸುಶ್ಚಾಸೌ ದೇವಶ್ಚ ವಾಸುದೇವಃ॥ ವಾ - ಎಲ್ಲವನ್ನು ಬಲ್ಲವನು. ೨) ಸತ್ತ್ವಂ ವಿಶುದ್ಧಂ ವಸುದೇವಶಬ್ದಿತಂ ಯದೀಯತೇ ತತ್ರ ಪುಮಾನ್ ಅಪಾವೃತಃ। ಸತ್ತ್ವಂ ಚ ಯಸ್ಮಿನ್ ಭಗವಾನ್ ವಾಸುದೇವಃ। (ಭಾಗ- ೪.೩.೨೩) ವಸುದೇವ - ಭಗವಂತನು ಎಲ್ಲಿ ವಾಸಿಸುವನೊ, ಬೆಳಗುವನೊ, ಅಂತಹ ಶುದ್ಧವಾದ ಅಂತಃಕರಣವು. ಅಷ್ಟು ಆವರಣವನ್ನು ಕಳಚಿ ಭಗವಂತನು

ಅಭಿವ್ಯಕ್ತನಾಗುವುದರಿಂದ ಅವನು 'ವಾಸುದೇವ'. ವಸುದೇವಸ್ಯಾಯಂ ವಾಸುದೇವಃ.

೩. 'ವಸನಾತ್‌ಸರ್ವಭೂತಾನಾಂ, ವಸುತ್ವಾದ್ದೇವಯೋಽಷಿತಃ। ವಾಸುದೇವಸ್ತತೋ ವೇದ್ಯಃ (ಮ.ಭಾ..ಉ. ೭೦-೩) ಸರ್ವಭೂತಾನಿ ವಸ್ತೇ ಆಚ್ಛಾದಯತಿ, ಸರ್ವಭೂತಾನಿ ಅತ್ರ ವಸಂತೀತಿ ವಾಸುಃ, ಸ್ವಭಾವತಃ ದೇವತ್ವಾತ್ ದೇವಃ। ಭಗವಂತನು ಸರ್ವಭೂತಗಳನ್ನು ಆಚ್ಛಾದಿಸುವುದರಿಂದ, ಸರ್ವಭೂತಗಳು ಇವನಲ್ಲಿ ನೆಲೆಸಿರುವುದರಿಂದ 'ವಾಸು' ಸ್ವಭಾವತಃ ದೇವನಾದುದರಿಂದ ದೇವ ಹೀಗೆ ವಾಸುದೇವ.

೪. ಸುಧಾಮನ್- ದಧಾತಿ ಧಾರಯತೀತಿ ಧಾಮ. ತೇಜಃ ಶಕ್ತಿಃ ಸಮೂಹಶ್ಚ ಗೃಹಂ ಧಾಮೇತಿ ಕಥ್ಯತೇ। ಇತಿ ಶಬ್ದನಿರ್ಣಯೇ (ಭಾಗ. ತಾ. ನಿ. ೪-೮-೮೫) ಸಮಸ್ತ ಪ್ರಪಂಚಕ್ಕೂ ಮನೆಯಂತೆ ಆಧಾರನಾಗಿರುವವನು.

೫. ಅನಂತಾಸನ ವೈಕುಂಠನಾರಾಯಣ ಪುರಾಣಿ ತು ತ್ರೀಣಿ ಧಾಮಾನಿ ವೈ ವಿಷ್ಣೋಃ . . . (ಬ್ರಹ್ಮಾಂಡ, ಭಾ.ತಾ.ನಿ. ೨-೬-೧೯) ಮುಕ್ತಾತ್ಮರು ಹೋಗಿ ಸೇರುವಂತಹ ಅನಂತಾಸನ, ವೈಕುಂಠ, ನಾರಾಯಣಪುರ (ಶ್ವೇತದ್ವೀಪ) ಎಂಬ ಮೂರು ಲೋಕಗಳಲ್ಲಿ ಸನ್ನಿಹಿತನಾಗಿರುವವನು.

೬. ಸದೋದಿತ - ೧) ಸದಾ ಉದಿತ ಅಭ್ಯುದಯೋಪೇತ। ೨) ಸದ್ಭಿಃ ಆ ಸಮಂತಾತ್ ಉತ್ಕೃಷ್ಟತಯಾ ಜ್ಞಾತ। (ಸದ್ + ಆ + ಉತ್ + ಇತ) 'ಇಣ್ ಗತೌ' ಗತ್ಯರ್ಥಾಃ ಜ್ಞಾನಾರ್ಥಾಃ। ೩) ಸದ್ಭಿಃ ಉತ್ತಮತಯಾ ಸ್ಮೃತ। ಇಕ್ ಸ್ಮರಣೆ. ೪) ಸದಾ - ಕಾಲತ್ರಯೇಽಪಿ, ಉದಿತ - ಅಸ್ತಮಯ ರಹಿತ.

ಅ. ಯಾವಾಗಲೂ ಅಭ್ಯುದಯದಿಂದ ಕೂಡಿದವನೆ !

ಆ. ಸಜ್ಜನರಿಂದ ಎಲ್ಲರಿಗಿಂತ ಉತ್ಕೃಷ್ಟನೆಂದು ತಿಳಿಯಲ್ಪಟ್ಟವನೇ।

ಇ. ಸಜ್ಜನರಿಂದ ಉತ್ತಮನೆಂದು ಸ್ಮರಿಸಲ್ಪಡುವವನೆ !

ಈ. ಮೂರು ಕಾಲದಲ್ಲೂ ಅಸ್ತಮಯವಿಲ್ಲದವನೆ ! ಅರ್ಥಾತ್ ನಿತ್ಯಜಾಗರೂಕನೆ !

೭. ಧರಾಧರ ಧಾರಿಣವೇಧುರಧರ್ತಃ- ಧರಾಧರ ! ಧಾರಿಣವೇಧುರಧರ್ತಃ!

ಧತ್ತೆ ಸರ್ವಮಿತಿ ಧಾಃ। (ವಾರ್‌ಶಬ್ದವತ್ ಧಾರ್‌ಶಬ್ದೋ ರೇಫಾಂತಃ) ಧಾರಃ- ಭೂಮೇಃ ಇನಾಃ- ಸ್ವಾಮಿನಃ ಧಾರಿಣಾಃ ಮೇರ್ವಾದಿಪರ್ವತಾಃ, ಕೀಲಕರೂಪೇಣ ಧರಾವಷ್ಟಂಭಕತ್ವಾತ್। ತೇಷಾಂ ವೇಧುರಃ ವೇದ್ಧುಂ ಶೀಲಮಸ್ಯಾಸ್ತೀತಿ ವೇಧನಶೀಲಃ ಶೇಷಃ, ಪ್ರಲಯೇ ಸ್ವಮುಖ ನಿರ್ಗತ ಅಗ್ನಿಜ್ವಾಲಯಾ ಮೇರ್ವಾದಿ ವೇಧನಾತ್। ತಸ್ಯ ಧರ್ತಾ ಕೂರ್ಮಸ್ವರೂಪೇಣ ಧಾರಕಃ ತತ್ಸಂಬುದ್ಧಿಃ ।

ಧಾರ್ - ಭೂಮಿಯ, ಇನ - ಒಡೆಯಗಳಾದ ಮೇರ್ವಾದಿ ಪರ್ವತಗಳು. ಕೀಲಕ ರೂಪದಿಂದ ಭೂಮಿಯನ್ನು ಹಿಡಿದಿರುವುದರಿಂದ. ಅವುಗಳ, ವೇಧುರ ತನ್ನ ಮುಖದಿಂದ, ಉತ್ಪನ್ನವಾದ ಅಗ್ನಿಜ್ವಾಲೆಗಳಿಂದ ಪ್ರಲಯದಲ್ಲಿ ಮೇರು ಮುಂತಾದವನ್ನು ನಾಶಮಾಡುವ ಶೇಷನನ್ನು, ಧರ್ತಃ - ಕೂರ್ಮರೂಪದಿಂದ ಧರಿಸಿಸುವವನೆ !

೮. 'ವಿಧಾನಂ' ಎಂಬ ಪಾಠದಲ್ಲಿ ವಿಧಾನಂ - ಕಾಮ್ಯಕರ್ಮಾನುಷ್ಠಾನವನ್ನು ಛಿಂಧಿ- ನಾಶಮಾಡು ಎಂದರ್ಥ.

**ಕೇಶವ ಕೇಶವ ಶಾಸಕ ವಂದೇ ಪಾಶಧರಾರ್ಚಿತ ಶೂರವರೇಶ ।**
**ನಾರಾಯಣಾಮಲಕಾರಣ ವಂದೇ ಕಾರಣಕಾರಣ ಪೂರ್ಣ ವರೇಣ್ಯ ॥ ೨ ॥**

ಬ್ರಹ್ಮ-ರುದ್ರರ ಪ್ರೇರಕನಾದ ಕೇಶವನೆ ! ಜಗವನಾಳುವ ದೊರೆಯೆ ! ಪಾಶಧಾರಿಯಾದ ವರುಣನಿಂದ ಪೂಜಿತನೆ ! ಶೂರಶ್ರೇಷ್ಠರಿಗೆ ಒಡೆಯನೆ ! ನಿನ್ನನ್ನು ನಮಿಸುತ್ತೇನೆ. ವಿಕಾರಾದಿದೋಷರಹಿತನಾದ, ಜಗತ್ತಿನ ನಿಮಿತ್ತ ಕಾರಣನೆ ! ಕಾರಣಗಳಾದ ಪ್ರಕೃತಿ ಮೊದಲಾದವುಗಳಿಗೂ ಕಾರಣನೆ ! ಪರಿಪೂರ್ಣನೆ ! ಸರ್ವೋತ್ತಮನೆ ! ನಾರಾಯಣನೆ ! ನಿನ್ನನ್ನು ನಮಿಸುತ್ತೇನೆ ಮತ್ತು ತುತಿಸುತ್ತೇನೆ.

**ವಿವರಣೆ:**

೧. ಕೇಶವ - 'ಕ' ಬ್ರಹ್ಮ, ಈಶ - ರುದ್ರ, ವ - ಪ್ರೇರಕ.

ಕೇಶ-ಶುಕ್ಲ, ಕೃಷ್ಣ ರೂಪ ಕೇಶಗಳನ್ನು ರಾಮ-ಕೃಷ್ಣರೂಪದಿಂದ ಭೂಮಿ ಯಲ್ಲಿ 'ವ' ಸಂಚಾರಗೊಳಿಸಿರುವವನು.

ಕೇ - ಪ್ರಲಯಜಲದಲ್ಲಿ ಶವ-ಸುಖರೂಪನಾಗಿರುವವನು.

ಶ - ವಿಷ್ಣುವಿಗಿಂತಲೂ ನಿಕೃಷ್ಟರಾದ ಬ್ರಹ್ಮರುದ್ರಾದಿಗಳೇ 'ಈಶ'

ಸರ್ವೋತ್ತಮರೆಂಬ ವಿಷ್ಣುವಿನ ಭಕ್ತರಲ್ಲದವರು. ಅವರನ್ನು 'ವ'- ತಮಸ್ಸಿನಲ್ಲಿ ಸಂಚಾರಗೊಳಿಸುವವನು. (ಅಂಧಂ ತಮೋ ನಿಯತಮೇತಿ ಹರಾವಭಕ್ತಃ ಭಕ್ತೋಽಪಿ ಕಂಜಜಗಿರೀಶಮುಖೇಷು - ಬ್ರಹ್ಮರುದ್ರಾದಿಗಳಲ್ಲಿ ಭಕ್ತರಾಗಿದ್ದರೂ ಹರಿಯಲ್ಲಿ ಭಕ್ತನಾಗದವನು ನಿಶ್ಚಯವಾಗಿಯೂ ಅಂಧಂತಮಸ್ಸಿಗೆ ಬೀಳುವನು (ಮ.ಭಾ.ತಾ.ನಿ.)

೨. ಶಾಸಕ - ಸಜ್ಜನರಲ್ಲಿ 'ಶ' - ಸುಖವನ್ನು, 'ಆಸಕ' - ಸ್ಥಾಪಿಸುವವನು. 'ಶ'-ಶಾಸ್ತ್ರದಲ್ಲಿ 'ಆಸ' ಸ್ಥಿತಿಯುಳ್ಳ ಸಜ್ಜನರಿಗೆ 'ಕ' - ಸುಖ ನೀಡುವವನು. (ಶಂ ಸ್ಯಾನ್ನಪುಂಸಕೇ ಶಾಸ್ತ್ರೇ ಇತಿ ಕೋಷಃ)

ಶಾಸಕ - ದುಷ್ಟ ಶಿಕ್ಷಕ.

೩. ಪಾಶಧರಾರ್ಚಿತ - ವರುಣನಿಂದ ಪೂಜಿಸಲ್ಪಟ್ಟವನು. ವರುಣಲೋಕಕ್ಕೆ ಹೋದ ನಂದಗೋಪನನ್ನು ತರಲು ಹೋದ ಶ್ರೀಕೃಷ್ಣನನ್ನು ವರುಣನು ಪೂಜಿಸಿದನು.

೪. ಶೂರವರೇಶ - ಸಂಸಾರದುಃಖಾತಿಶಯಜನ್ಯವಾದ 'ಶು' ಎಂಬ ರವ ಶಬ್ದವನ್ನು ರ - ನಾಶಪಡಿಸುವ ಜ್ಞಾನಭಕ್ತ್ಯಾದಿಗಳಿಗೆ ಈಶ - ಸ್ವಾಮಿಯು.

೫. ನಾರಾಯಣ.

ಅ. ನಾರ - ಗುಣಗಳಿಗೆ ಅಯನ - ಆಶ್ರಯ.

ಇ. ನ ಅರಾಯಣ - ದೋಷಾಶ್ರಯನಲ್ಲ.

ಉ. ನಾರ - ದೋಷರಹಿತರಾದ ಮುಕ್ತರಿಗೆ, ಅಯನ - ಆಶ್ರಯ.

ಋ. ನಾರ-ನರರ ಹೃದಯವೆ, ಅಯನ-ಆಶ್ರಯವಾಗಿರುವವನು.

(ಏಕೋ ದೇವಃ ಸರ್ವಭೂತೇಷು ಗೂಢಃ)

ಎ. ನಾರ - ನರರ ಇಂದ್ರಿಯಗಳಿಗೆ, ಅಯನ - ಆಶ್ರಯನಾಗಿರುವವನು.

(''ಯಃ ಪ್ರಾಣೇ ತಿಷ್ಠನ್, ಯಃ ವಾಚಿ ತಿಷ್ಠನ್, ಯಶ್ಚಕ್ಷುಷಿ ತಿಷ್ಠನ್'')

ಐ. ನಾರ - ದೋಷರಹಿತಗಳಾದ ಅನಂತಾಸನ ವೈಕುಂಠ ಶ್ವೇತ ದ್ವೀಪಗಳೇ, ಅಯನ - ಆಶ್ರಯವಾಗಿರುವವನು.

ಒ. ನಾರ - ನರಸಂಬಂಧಿಯಾದ ಜಗತ್ತೇ ಅಯನ - ಆಶ್ರಯವಾಗಿರುವವನು.

(ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ। ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ)

೭. ನರ - ಮುಖ್ಯ ಪ್ರಾಣ, ನಾರ - ಪ್ರಾಣನ ಅವತಾರಗಳಾದ ಹನುಮಂತ, ಭೀಮ, ಮಧ್ವ ರೂಪಗಳ ಸಂಬಂಧಿಗಳಾದ ಸುಗ್ರೀವಾದಿಗಳು, ಅರ್ಜುನಾದಿಗಳು, ಮಧ್ವಮತಾನುವರ್ತಿಗಳಾದ ವೈಷ್ಣವರು. ಇವರಿಗೆ 'ಅಯನ'- ಆಶ್ರಯವಾಗಿರುವವನು.

೮. ನರ - ಶೇಷ, ಅವರ ಸಂಬಂಧಿಯಾದ ಶರೀರವೆ - 'ನಾರ'. ಅಯನ- ಆಸನವನ್ನಾಗಿ, ಹಾಸಿಗೆಯನ್ನಾಗಿ ಶೇಷಶರೀರವನ್ನು ಆಶ್ರಯಿಸಿರುವವನು.

೯. ನರ - ಅರ್ಜುನ - ಅವನ ಗೆಲುವೆ - ನಾರ. ಅದಕ್ಕೆ 'ಅಯನ'- ಆಶ್ರಯ (''ನಿಮಿತ್ತಮಾತ್ರಂ ಭವ ಸವ್ಯಸಾಚಿನ್'')

೧೦. ನಾರ - ಅರ್ಜುನ ಸಂಬಂಧಿಗಳಾದ ಪಾಂಡವರಿಗೆ, ಅಯನ - ಆಶ್ರಯನು.(ಮಮ ಪ್ರಾಣಾ ಹಿ ಪಾಂಡವಾಃ)

೧೧. ನಾರ - ತತ್ವಗಳಿಗೆ, ಅಯನ - ಆಶ್ರಯ.

(ನರಾಜ್ಜಾತಾನಿ ತತ್ತ್ವಾನಿ ನಾರಾಣೀತಿ ವಿದುರ್ಬುಧಾಃ।
ತಾನ್ಯೇವಾಯನಂ ಯಸ್ಯ ತೇನ ನಾರಾಯಣಃ ಸ್ಮೃತಃ॥ - ಭಾರತ)

೧೨. ನಾರ - ನರಸಂಬಂಧಿಯಾದ ಸೃಷ್ಟ್ಯಾದಿಗಳನ್ನು ಅಯನ - ಹೊಂದಿಸುವವನು.

೧೩. ಸಾರೂಪ್ಯಮುಕ್ತಿವಚನೋ ಸ ನಾರೇತಿ ವಿದುರ್ಬುಧಾಃ।
ಯೋ ದೇವೋ ಹ್ಯಯನಂ ತಸ್ಯ ಸ ಚ ನಾರಾಯಣಃ ಸ್ಮೃತಃ॥

ಸಾರೂಪ್ಯಮುಕ್ತಿ - 'ನಾರ', ಅದನ್ನು ಕೊಡುವ ಆಶ್ರಯ 'ಅಯನ'.

''ಸಂಚಿಂತ್ಯ ನಾರಾಯಣಶಬ್ದ ಮಾತ್ರಂ
ವಿಮುಕ್ತದುಃಖಾಃ ಸುಖಿನೋ ಭವಂತಿ॥''

ಹೀಗೆ ನಾರಾಯಣ ಶಬ್ದದ ಅರ್ಥವನ್ನು ತಿಳಿದವರು ದುಃಖ ಕಳೆದುಕೊಂಡು ಸುಖಿಗಳಾಗುವರು.

**ಮಾಧವ ಮಾಧವ ಸಾಧಕ ವಂದೇ**
**ಬಾಧಕ ಬೋಧಕ ಶುದ್ಧ ಸಮಾಧೇ ।**

**ಗೋವಿಂದ ಗೋವಿಂದ ಪುರಂದರ ವಂದೇ**
**ಸ್ಕಂದಸನಂದನವಂದಿತಪಾದ** ॥ ೩ ॥

ಲಕ್ಷ್ಮೀಪತಿಯೇ ! ಮಧುಕುಲಾವತೀರ್ಣನೇ ! ಭಕ್ತರ ಮನೋರಥವನ್ನು ಸಾಧಿಸಿಕೊಡುವವನೇ! ದುಷ್ಟರ ಅಭೀಷ್ಟಗಳಿಗೆ ಬಾಧಕನೇ! ದತ್ತ, ವ್ಯಾಸ, ಕಪಿಲ ಮುಂತಾದ ರೂಪಗಳಿಂದ ಜ್ಞಾನಪ್ರದನೇ ! ಸಜ್ಜನರ ಶಿಕ್ಷಣಕ್ಕಾಗಿ ವ್ಯಾಸಾದಿ ರೂಪದಿಂದ ನಿರ್ದೋಷವಾದ ಧ್ಯಾನವುಳ್ಳವನೇ! ನಿನ್ನನ್ನು ವಂದಿಸುವೆನು. ವೇದಪ್ರತಿಪಾದ್ಯನೇ ! ಗೋಪಾಲಕನೇ ! ಜೀವನ ಆವರಣವಾದ ಲಿಂಗಶರೀರ ವನ್ನು ನಾಶಪಡಿಸುವವನೇ ! ಸ್ಕಂದ ಮತ್ತು ಸನಂದನ ಮುನಿಗಳಿಂದ ವಂದಿತಪಾದನೇ ! ವಂದಿಸುವೆನು.

ಸ್ಕಂದ ಸುನಂದನ- ಹೀಗೆ ಕೆಲವೆಡೆ ಪಾಠವಿದೆ.

**ವಿವರಣೆ**: ಸ್ಕಂದಾಃ ಜ್ಞಾನಿನಃ, ಸುನಂದನಾಃ - ಪ್ರಿಯಸುತಾಃ ಯಸ್ಯ ಸಃ। ತತ್ಸಂಬುದ್ಧಿಃ।

''ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಮಮ ಚ ಪ್ರಿಯಃ॥''

ಯಾರಿಗೆ ಜ್ಞಾನಿಗಳೆ ಪ್ರಿಯಸುತರೋ ಅಂತಹವನು ಎಂದು ಅರ್ಥ.

ಮಾಧವ-

ಮಾ ವಿದ್ಯಾ ಹರೇಃ ಪ್ರೋಕ್ತಾ ತಸ್ಯಾ ಈಶೋ ಯತೋ ಭವಾನ್।
ತಸ್ಮಾನ್ಮಾಧವನಾಮಾಽಸಿ ಧವಃ ಸ್ವಾಮೀತಿ ಶಬ್ದಿತಃ॥
(ಹರಿವಂಶ ೩-೮೮-೪೯)

ಮಾ- ಬ್ರಹ್ಮವಿದ್ಯೆಗೆ, ಧವ - ಅಧಿಪತಿಯಾಗಿರುವವನು.

ಮಧೋಃ ಅಯಂ ಮಾಧವಃ। ತತ್ಸಂಬುದ್ಧಿಃ.

ಮಧು ವಿದ್ಯೆ ವಿಷಯನಾದುದರಿಂದ ಮಾಧವಃ.

ಮೌನಾದ್ಧ್ಯಾನಾಚ್ಚ ವಿದ್ಧಿ ಭಾರತ ಮಾಧವಮ್। (ಮ. ಭಾರ. ಉ. ೬೯-೪)

ಮನನ, ಧ್ಯಾನಗಳಿಗೆ ಗೋಚರನಾಗುವುದರಿಂದ ಮಾಧವ.

ಗೋವಿಂದ-

ನಷ್ಟಾಂ ವೈ ಧರಣೀಂ ಪೂರ್ವಮವಿಂದಂ ವೈ ಗುಹಾಗತಮ್।
ಗೋವಿಂದ ಇತಿ ತೇನಾಹಂ ದೇವೈರ್ವಾಗ್ಭಿರಭಿಷ್ಟುತಃ॥
(ಮ.ಭಾ. ಶಾಂತಿ ೩೫೨-೪)

ತನ್ನ ಕಕ್ಷೆಯಿಂದ ಕಳಚಿ ಪಾತಾಳಗುಹೆಗೆ ಬಿದ್ದ ಭೂಮಿಯನ್ನು ಭಗವಂತನು ವರಾಹರೂಪದಿಂದ ಹೊಂದಿರುವುದರಿಂದಲೆ ತಾನು ದೇವತೆಗಳಿಂದ 'ಗೋವಿಂದ' ಎಂಬುದಾಗಿ ಸ್ತುತನಾಗಿರುವನು.

ಗೌರೇಷಾ ತು ತಥಾ ವಾಣೀ ತಾಂ ತು ವಿಂದಯತೇ ಭವಾನ್।
ಗೋವಿಂದಸ್ತು ತತೋ ದೇವ ಮುನಿಭಿಃ ಕಥ್ಯತೇ ಭವಾನ್॥ (-ಹರಿವಂಶ)

ದೇವ ! ವೇದವಾಣಿಯೇ 'ಗೋ'. ಅದನ್ನು ಯೋಗ್ಯರಿಗೆ ತಲುಪಿಸುವುದ ರಿಂದಲೆ ನೀನು ಮುನಿಗಳಿಂದ 'ಗೋವಿಂದ' ಎನಿಸಿರುವಿ.

ಸ್ಕಂದ - ಸ್ಕಂದೋ- ಜಗತಃ ಸ್ಕಂದನಾತ್ (ವಿಭೂತಿ ತತ್ತ್ವ ಗೀ. ತಾತ್ಪರ್ಯ ೧೦-೨೪).

ಜಗತ್ತನ್ನು ತನ್ನಿಂದ ಹೊರಹೊಮ್ಮಿಸಿರುವುದರಿಂದ ಸ್ಕಂದ ಎಂದೆನಿಸಿರುವ ಶ್ರೀಹರಿಯು ಸ್ಕಂದಾಂತರ್ಯಾಮಿ ಎಂದೂ ಅರ್ಥ.

**ವಿಷ್ಣೋ ಸೃಜಿಷ್ಣೋ ಗ್ರಸಿಷ್ಣೋ ವಿವಂದೇ**
**ಕೃಷ್ಣ ಸದುಷ್ಣವಧಿಷ್ಣೋ ಸುಧೃಷ್ಣೋ ।**
**ಮಧುಸೂದನ ದಾನವಸಾದನ ವಂದೇ**
**ದೈವತಮೋದನ ವೇದಿತಪಾದ ॥ ೪ ॥**

ಜಗದೊಳಗೆ ತುಂಬಿರುವವನೇ! ಸೃಷ್ಟಿ ಮಾಡುವ ಸ್ವಭಾವದವನೇ! ಪ್ರಲಯ ಕಾಲದಲ್ಲಿ ವಿಶ್ವವನ್ನೇ ಕಬಳಿಸುವವನೇ! ಪೂರ್ಣಾನಂದನೇ! ಸಜ್ಜನರಿಗೆ ಸಂತಾಪ ಕೊಡುವ ದೈತ್ಯರ ಸಂಹರಣಶೀಲನೇ ! ಚೆನ್ನಾಗಿ ಧರ್ಮ ಸಂಸ್ಥಾಪನಶೀಲನೇ ! ನಿನ್ನನ್ನು ವಿಶೇಷವಾಗಿ ವಂದಿಸುವೆನು. ಮಧುನಾಮಕ ದೈತ್ಯ ಸಂಹಾರಕನೇ ! ದಾನವಸಂಹಾರಕನೇ ! ದೇವತೆಗಳನ್ನು ಸಂತೋಷಪಡಿಸುವವನೇ ! ಭಕ್ತರಿಗೆ ತಿಳಿಸಲ್ಪಟ್ಟ ಸ್ವರೂಪನೇ ! ವೇದ ಪ್ರತಿಪಾದ್ಯಪಾದನೇ ! ನಿನಗೆ ವಂದನೆಯು.

**ವಿವರಣೆ:** - ''ವಿಷ್ಣು ಸೃಜಿಷ್ಣು ಗ್ರಸಿಷ್ಣು'', 'ಸದುಷ್ಣವಧಿಷ್ಣ ಸ್ವಧೃಷ್ಣೋ' - ಹ್ಯ.ಪಾ.

ವಿಷ್ಣೋ- 'ತಸ್ಮೈ ವಾ ಏತಸ್ಯೈ ಸಂಹಿತಾಯೈ ಣಕಾರೋ ಬಲಂ ಷಕಾರಃ ಪ್ರಾಣ ಆತ್ಮಾ' (ಐ. ಉ. ೨-೮-೭-೩)

ವಿಷ್ಣುನಾಮ್ನಿ ಣ ಶಬ್ದೇನ ವಿಷ್ಣೋರ್ಬಲಮುದೀರ್ಯತೇ।
'ಣ' ಇತ್ಯಾಕ್ರಿಯಮಾಣತ್ವಾಣ್ಣಕಾರೋಽಸ್ಯ ಬಲಂ ಮತಮ್।

ವಿಷ್ಣುನಾಮ್ನಿ ಷಕಾರೇಣ ರಮಾಬ್ರಹ್ಮೇಶಪೂರ್ವಿಣಃ।
ಪ್ರಣೇತೃತಾಽಖಿಲಸ್ಯೈವ ವಿಷ್ಣೋರುಕ್ತಾತ್ಮತಾ ತಥಾ।
ಆತತತ್ವಂ ಸರ್ವಗುಣೈರ್ದೇಶತಃ ಕಾಲತಸ್ತಥಾ।
ಆತ್ಮಶಬ್ದೋದಿತಂ ತಚ್ಚ ಷಶಬ್ದೇನಾಭಿಧೀಯತೇ।
ಷ ಇತ್ಯಾಕ್ರಿಯಮಾಣತ್ವಂ ಪ್ರಣೇತೃತ್ವಂ ಚ ಪೂರ್ಣತಾ।
ವಿಷ್ಣೋಃ ಷಕಾರ ಇತ್ಯುಕ್ತಾ ವೀತುಕಸ್ಯ ವಿಶಿಷ್ಟತಾ।
ಅಂತಸ್ಥಿತ ಉಕಾರಸ್ತು ತಾಚ್ಛೀಲ್ಯಂ ಹಿ ಹರೇರ್ವದೇತ್।
ಏವಂ ವಿಶಿಷ್ಟಪ್ರಾಣತ್ವಮಾತತತ್ವಂ ಚ ಸರ್ವತಃ।
ವಿಶಿಷ್ಟಂ ಚ ಬಲಂ ವಿಷ್ಣೋಃ ಸರ್ವಸ್ಮಾಚ್ಛೀಲಮಿತ್ಯಪಿ।
ಉದಿತಂ ವಿಷ್ಣುಶಬ್ದೇನ (ಐ.ಉ.ಭಾ.)

ಭಗವಂತನು ರಮಾಬ್ರಹ್ಮಾದಿಗಳೆಲ್ಲರನ್ನೂ ಪ್ರತಿಕ್ಷಣದಲ್ಲೂ ಪ್ರತಿಯೊಂದು ವಿಷಯದಲ್ಲೂ ಅಂತರ್ಯಾಮಿಯಾಗಿ ಪ್ರೇರಿಸುತ್ತಿರುವನು. ಇದಕ್ಕೆ ಪೂರಕವಾದ ಜ್ಞಾನಬಲ, ಕ್ರಿಯಾಬಲ, ಗುಣ ದೇಶ ಕಾಲವ್ಯಾಪ್ತಿ ಎಲ್ಲವೂ ಇವನ ಸ್ವರೂಪದಲ್ಲಿ ಅಡಕವಾಗಿದೆ. ಹೀಗೆ ವಿಶಿಷ್ಟವಾದ ಬಲ, ಪ್ರೇರಕತ್ವ ತ್ರಿವಿಧ ವ್ಯಾಪ್ತಿ ಇವುಗಳು ಸ್ವಾಭಾವಿಕವಾಗಿ ಇರುವುದರಿಂದಲೆ 'ವಿಷ್ಣು' ಎನಿಸಿರುವನು. ಇದನ್ನು ಮಹಿದಾಸನಾಮದ ಶ್ರೀಹರಿಯೇ ಐತರೇಯ ಉಪನಿಷತ್ತಿನಲ್ಲಿ ಉಪ-ದೇಶಿಸಿರುವನು.

ಮಧು - ಅಯೋಗ್ಯರ ಯೋಗ್ಯತೆಗೆ ಮೀರಿದ ಸುಖವನ್ನು, ಸೂದನ-ನಾಶಪಡಿಸುವವನು. ಮಧು - ಸುಖವನ್ನು ಯೋಗ್ಯರಿಗೆ, ಸೂದನ - ಕೊಡುವವನು.

''ಮಧು ನಾಮ ಸುಖಂ ವಿದ್ಯಾತ್'' - ಶಬ್ದನಿರ್ಣಯೇ (ಭಾಗ. ತಾ.ನಿ. ೧೧-೭-೪೪) ಅಯೋಗ್ಯಾನಾಂ ತಾದೃಶಂ ಮಧು ಸೂದಯತಿ ನಾಶಯತೀತಿ ಮಧುಸೂದನಃ.

ದಾನವಸಾದನ - 'ದ' ದಾನಶೀಲರಾದ ಸಜ್ಜನರಿಗೆ, 'ಅನವಸಾದನ' ಕ್ಲೇಶ ನೀಡದಿರುವವನು. ದಾನ-ಮದಜಲವನ್ನು - 'ವ' ಕೆನ್ನೆಗಳಲ್ಲಿ ಸುರಿಸುವ ಆನೆ-ಕುವಲಯಾಪೀಡವನ್ನು ಸಾದನ - ಸಂಹರಿಸಿದವನು.

ತ್ರಿವಿಕ್ರಮ ನಿಷ್ಕ್ರಮ ವಿಕ್ರಮ ವಂದೇ
ಸುಕ್ರಮ ಸಂಕ್ರಮ ಹುಂಕೃತವಕ್ತ್ರ ।
ವಾಮನ ವಾಮನ ಭಾಮನ ವಂದೇ
ಸಾಮನ ಸೀಮನ ಶಾಮನ ಸಾನೋ ॥ ೫ ॥

ವರ್ಣಾಶ್ರಮಾಚಾರ ರೂಪವಾದ ವಿಧಿಬಂಧರಹಿತನಾದವನೇ ! ಪರಾಕ್ರಮ ಶಾಲಿಯೇ ! ಲೋಕಮರ್ಯಾದೆಗಾಗಿ ಧರ್ಮಮರ್ಯಾದೆಯ ಕ್ರಮವುಳ್ಳವನೇ! ಧರ್ಮಸ್ಥಾಪನೆ ಮತ್ತು ವಾಸುದೇವಾದಿ ವ್ಯೂಹಕ್ರಮವುಳ್ಳವನೇ ! ಪ್ರಲಯದಲ್ಲಿ ಹುಂಕಾರದಿಂದ ಸರ್ವನಾಶಮಾಡುವ ಮುಖದವನೇ ! ಮೂರು ವೇದ, ಕಾಲ, ಗುಣ, ಲೋಕ, ದೇವ-ದಾನವ-ಮನುಷ್ಯರನ್ನು ಚೇತನ, ಅಚೇತನ, ಚೇತನಾಚೇತನಮಿಶ್ರರನ್ನು ಅತಿಕ್ರಮಿಸಿ ಇರುವವನೇ ! ನಿನಗೆ ವಂದನೆ. ಸಜ್ಜನರಿಗೆ ಕಲ್ಯಾಣವನ್ನು, ದುರ್ಜನರಿಗೆ ಅಮಂಗಲವನ್ನು ನೀಡುವವನೇ ! ಭಕ್ತರಿಗೆ ಜ್ಞಾನಪ್ರಕಾಶಕನೇ ! ಸಾಮವೇದ ಪ್ರತಿಪಾದ್ಯನೇ ! ಧರ್ಮಮರ್ಯಾದೆ ಯನ್ನು ತೋರುವ ಭಕ್ತರ ಕ್ರೋಧ ದುಃಖಾದಿಗಳನ್ನು ನಿವೃತ್ತಿಗೊಳಿಸುವವನೇ! ಸರ್ವಾಧಾರನೇ ! ನಿನಗೆ ನಮನವು.

**ವಿವರಣೆ:** - ತ್ರಿವಿಕ್ರಮ - ''ವೇದಾನ್, ಕಾಲಾನ್, ಗುಣಾನ್, ಲೋಕಾನ್, ದೇವಮಾನುಷ ದಾನವಾನ್। ಚೇತನಾಚೇತನಾನ್ ಮಿಶ್ರಾನ್ ತ್ರೀಣಿ ಪದಾ ವಿಚಕ್ರಮೇ'' (ಋ.ಭಾ. ೨೨-೧೮).

ಸಾಮನ- 'ಸಾ' - ಭಾರತೀ, ಅಮ - ಪ್ರಾಣ. ಅವರಿಬ್ಬರಿಗೆ 'ನ' - ಪ್ರೇರಕ. ('ವಾಗೇವ ಸಾ ಪ್ರಾಣೋಽಮಃ' ಉ.ನಿ.)

ವಾಮನಾವತಾರ ಕಥೆಯೂ ಇಲ್ಲಿ ಸೂಚಿತವಾಗಿದೆ -

ವಾಮನ - ವಾಮನರೂಪಿ. ಭಾಮನ - ಬ್ರಹ್ಮತೇಜಸ್ಸಿನಿಂದ ಶೋಭಿಸುವ ಬಾಲರೂಪನು! ಸಾಮನ - ಯಾಚನೆಯ ಉಪಾಯವನ್ನುಅನುಸರಿಸಿದವನು. (ಸಾಮ ಸಾಂತ್ವನೇ) ಸೀಮನ - ಬಲಿಯನ್ನು ಬೇಡಿ ಭೂಮಿಯ ಸೀಮೆಯನ್ನು ಹೊಂದಿದವನು. ಶಾಮನ - ಬಲಿಗರ್ವ ಶಮನ ಮಾಡಿದವನು. ಸಾನೋ - ಕೊನೆಯಲ್ಲಿ ಬಲಿಗೆ ಸುಖ ನೀಡುವವನು (ಷಣು - ದಾನೇ)

ವಾಮನ - ಸಾಧಕಂ ಭಕ್ತಿ ಜ್ಞಾನಾದಿದಾನದ್ವಾರಾ, ವಾಮಂ - ಸ್ವರೂಪತಃ

ಅತಿ ಸುಂದರಂ, ನಯತಿ - ಪ್ರೇರಯತೀತಿ ವಾಮನಃ। ಸಾಧಕನನ್ನು ಭಕ್ತಿ ಜ್ಞಾನಾದಿಗಳನ್ನು ನೀಡುವುದರ ಮೂಲಕ ಸ್ವರೂಪ ಸುಂದರನನ್ನಾಗಿ ಮಾಡುವವನು.

ಶಾಮನ - ಶಾಮಯತಿ - ದರ್ಶಯತಿ ಸ್ವಾತ್ಮಾನಂ ಭಕ್ತಾನ್ ಪ್ರತಿ ಇತಿ ಶಾಮನಃ (ಶಮೋ ದರ್ಶನೇ ಪಾ.ಸೂ.) ಭಕ್ತರಿಗೆ ತನ್ನನ್ನು ತೋರಿಸುವವನು.

**ಶ್ರೀಧರ ಶ್ರೀಧರ ಶಂಧರ ವಂದೇ**
**ಭೂಧರ ವಾರ್ಧರ ಕಂಧರಧಾರಿನ್।**
**ಹೃಷೀಕೇಶ ಸುಕೇಶ ಪರೇಶ ವಿವಂದೇ**
**ಶರಣೇಶ ಬಲೇಶ ಕಲೇಶ ಸುಖೇಶ ॥೬॥**

ವಕ್ಷಸ್ಥಲದಲ್ಲಿ ಶ್ರೀದೇವಿಯನ್ನು ಧರಿಸಿದ ಹೇ ಶ್ರೀಧರ ! ಸ್ವರೂಪಸುಖ ಹೊಂದಿರುವವನೇ ! ಭೂದೇವಿಯನ್ನು ಧರಿಸಿದವನೇ ! ನೀರನ್ನು - ಶಮಾತ್ಮಕವಾದ ಪ್ರಲಯಜಲವನ್ನು- ಹೊತ್ತವನೇ! ಮುಕ್ತರನ್ನು ಅಥವಾ ಮೋಡಗಳನ್ನು ಧರಿಸಿದವನೇ ! ನಿನಗೆ ವಂದನೆ. ಇಂದ್ರಿಯ ನಿಯಾಮಕನೇ ! ಶೋಭನವಾದ ಕೇಶವುಳ್ಳವನೇ ! ಬ್ರಹ್ಮರುದ್ರರನ್ನು ಮಕ್ಕಳು, ಮೊಮ್ಮಕ್ಕಳನ್ನಾಗಿ ಹೊಂದಿರುವವನೇ ! ಉತ್ತಮರಾದ ಬ್ರಹ್ಮಾದಿ ದೇವತೆಗಳಿಗೆ ಸ್ವಾಮಿಯೇ ! ರಕ್ಷಕರಿಗೂ ಒಡೆಯನೇ ! ಅರವತ್ತುನಾಲ್ಕು ಕಲೆಗಳಿಗೆ, ಉಪನಿಷತ್ತು ತಿಳಿಸುವ ಹದಿನಾರು ಕಲೆಗಳಿಗೆ ನಿಯಾಮಕನೇ ! ಮತ್ಸ್ಯಾದಿ ಸ್ವರೂಪಾಂಶಗಳನ್ನು ವ್ಯಕ್ತಗೊಳಿಸುವವನೇ ! ಬ್ರಹ್ಮಾದಿ ಭಿನ್ನಾಂಶರಿಗೂ ಈಶನೇ ! ಮಹಾಬಲದೊಡೆಯನೇ! ಲೌಕಿಕ ಅಲೌಕಿಕ ಸುಖಗಳಿಗೆ ನಿಯಾಮಕನೇ ! ನಿನ್ನನ್ನು ವಂದಿಸುತ್ತೇನೆ.

**ವಿವರಣೆ:** -'ಕಲೇಶ ಬಲೇಶ' ಹ್ರ.ಪಾ.

ಭೂಧರ - ಕೂರ್ಮರೂಪದಿಂದ ಭೂಮಿಯನ್ನು ಹೊತ್ತವನು. (ಭುವಂ ದಧತಿ ಇತಿ ಭೂಧಾಃ - ಹರಿಶ್ಚಂದ್ರಾದಯಃ। ತೇಭ್ಯೋ ರಾತಿ ಅಭೀಷ್ಟಂ ಇತಿ ಭೂಧರಃ) ಭೂಧ - ಭೂಮಿಯನ್ನಾಳುವ ಹರಿಶ್ಚಂದ್ರಾದಿ ಅರಸರು, ಅವರಿಗೆ ಅಭೀಷ್ಟಪ್ರದನು. ಭೂಧ - ಭೂಮಿಯನ್ನು ಹೊತ್ತ ಕುಲಪರ್ವತಗಳಲ್ಲಿ ''ರ'' ಕ್ರೀಡಿಸುವವನು. (ಭೂಧೇಷು ರಮತೇ ಇತಿ ಭೂಧರಃ)

ಕಂಧರಧಾರಿನ್ - ಕಂ ಸುಖಂ ಧಾರಯಂತೀತಿ ಕಂಧರಾಃ ಮುಕ್ತಾಃ। ತಾನ್ ಧರತೀತಿ ಕಂಧರಧಾರೀ. ತತ್‌ಸಂಬುದ್ಧೌ। ಮುಕ್ತಧಾರಕ.

೧. ಕಂ - ಜಲಂ ಧಾರಯಂತೀತಿ ಕಂಧರಾಃ ಮೇಘಾಃ। ತಾನ್ ಧರತೀತಿ ವಾ ಕಂಧರಧಾರೀ। ಮೇಘಗಳನ್ನು ಹೊತ್ತವನು. (''ಯಸ್ಯ ಲೋಮ್ನಿ ಸ್ಥಿತಾಃ ಮೇಘಾಃ).

೨. ಕಂ-ಬ್ರಹ್ಮಾಣಂ ಕುಕ್ಷೌ ಧರತೀತಿ ಕಂಧರಾ ಲಕ್ಷ್ಮೀಃ। ತಾಂ ಧರತಿ ವಕ್ಷಸಿ ಇತಿ।

೩. ಕಂ - ಬ್ರಹ್ಮನನ್ನು ಧರಾ - ಉದರದಲ್ಲಿ ಹೊತ್ತ ಲಕ್ಷ್ಮೀ. ಕಂಧರಧಾರಿನ್- ಅವಳನ್ನು ವಕ್ಷಸ್ಥಲದಲ್ಲಿ ಹೊತ್ತವನೇ!

೪. ಕಂಧರ - ಕಂ-ಬ್ರಹ್ಮನನ್ನು, ಧರ - ಧರಿಸಿರುವ ಕಮಲ. ಅದನ್ನು ನಾಭಿಯಲ್ಲಿ ಧರಿಸಿದವನೆ ! - ಕಂಧರಧಾರಿನ್.

ಸುಕೇಶ - ಸು-ಶೋಭನಾಃ ಕೇಶಾಃ ಯಸ್ಯ ಸಃ ಸುಕೇಶಃ। ಕಶ್ಚ ಈಶಶ್ಚ ಕೇಶೌ। ಶೋಭನೌ ಕೇಶೌ - ಬ್ರಹ್ಮರುದ್ರೌ ಕ್ರಮಾತ್ ಪುತ್ರತ್ವೇನ ಪೌತ್ರತ್ವೇನ ಚ ಯಸ್ಯ ತತ್ಸಂಬುದ್ಧಿಃ।

ಪರೇಶ- ಪರೇ - ಸ್ವಸ್ಮಾದನ್ಯೇ ಬ್ರಹ್ಮರುದ್ರಾದಯಃ, ಈಶಾಃ - ಲೋಕೇಶಾಃ ಯಸ್ಮಾತ್ಸಃ। ತತ್ಸಂಬುದ್ಧಿಃ। ತನಗಿಂತ ಭಿನ್ನರಾದ ಬ್ರಹ್ಮಾದಿಗಳು ಯಾರಿಂದ ಲೋಕಪಾಲಕರಾದರೋ ಅಂತಹವನು.

ಶರಣೇಶ - ಶಂ -ಸುಖಹೇತುಃ, ರಣಃ - ಶಬ್ದಃ ವೇದಲಕ್ಷಣಃ। ತಸ್ಯ ಈಶಃ। ಸುಖಸಾಧನವೇದನಿಯಾಮಕನೇ !

ಬಲೇಶ - ಬಲಸ್ಯ - ಯಾದವಸೈನ್ಯಸ್ಯ - ಈಶಃ ನಿಯಾಮಕಃ । ತತ್ಸಂಬುದ್ಧಿಃ। ಯಾದವಸೈನ್ಯನಿಯಾಮಕನೇ!

ಬಃ - ಬಲಾತ್ಮಾ ಮುಖ್ಯಪ್ರಾಣಃ ಅಪಿ ಲೇಶಃ ಯಸ್ಯ ಸಃ। ತತ್ಸಂಬುದ್ಧಿಃ। ಬಲರೂಪರಾದ ಮುಖ್ಯಪ್ರಾಣರೂ ಕೂಡ ಯಾರ ಮುಂದೆ ಲೇಶರೋ ಅಂತಹವನು.

ಬಲಸ್ಯ - ಮನನಸ್ಯ ಈಶಃ। ಮನನಕ್ಕೆ ಸ್ವಾಮಿಯೇ ! ''ನಾಯಮಾತ್ಮಾ ಬಲಹೀನೇನ ಲಭ್ಯಃ'' ಇತಿ ಶ್ರುತೌ ಬಲಂ ಮನನಮಿತಿ ವ್ಯಾಖ್ಯಾನಾತ್.

ಸುಖೇಶ - ಶೋಭನಾನಿ ಖಾನಿ ಇಂದ್ರಿಯಾಣಿ - ಸುಖಾನಿ. ಸುಖಾನಾಂ ಈಶಃ। ಶೋಭನಗಳಾದ ಇಂದ್ರಿಯಗಳಿಗೆ ನಿಯಾಮಕನೇ,

**ಪದ್ಮನಾಭ ಶುಭೋದ್ಭವ ವಂದೇ**
**ಸಂಭೃತಲೋಕಭರಾಭರ ಭೂರೇ ।**
**ದಾಮೋದರ ದೂರತರಾಂತರ ವಂದೇ**
**ದಾರಿತಪಾರಗಪಾರ ಪರಸ್ಮಾತ್ ॥ ೭ ॥**

ಎಲ್ಲ ಮಂಗಲಗಳಿಗೆ ಕಾರಣನೇ ! ನಿತ್ಯ ಅಭಿವ್ಯಕ್ತವಾದ, ಅಭಿವೃದ್ಧವಾದ ಅಪರಿಮಿತ ಕಲ್ಯಾಣಗುಣಪೂರ್ಣನೇ ! ಸಜ್ಜೀವರಿಗೆ ಮುಕ್ತಿದಾತನೇ ! ಸಾಧು ಜನರ ಹಿತಕ್ಕಾಗಿ ನಾನಾ ಅವತಾರಗಳನ್ನು ಧರಿಸಿದವನೇ ! ಅನಂತ ಜೀವರಾಶಿಗಳನ್ನು ಹೊತ್ತ ಹದಿನಾಲ್ಕು ಲೋಕಗಳನ್ನು ಲೀಲೆಯಿಂದ ಧರಿಸಿದವನೇ ! ಬ್ರಹ್ಮಾದಿ ಜನ ಸಮುದಾಯದ ಪೋಷಕನೇ ! ವಿಶ್ವಂಭರನೇ! ಬಹುರೂಪನೇ! ತಾವರೆಯನರಳಿಸುವ ರವಿಯಂಥ ಕಾಂತಿಯವನೇ ! ಬ್ರಹ್ಮಾದಿಗಳಿಗಿಂತ ಹಿರಿಯಳಾದ ರಮೆಗಿಂತ ಹಿರಿಯನೇ ! ಎಲ್ಲರ ಹೃದಯಕಮಲದಲ್ಲಿ ಸರ್ವಾಶ್ರಯನಾಗಿರುವನೇ! ಭಕ್ತರ ಹೃದಯಕಮಲದಲ್ಲಿ ಅಪರೋಕ್ಷ ಜ್ಞಾನವೀಯುವ ಪದ್ಮನಾಭನೇ ! ಸಕಲಲೋಕಾಧಾರವಾದ ಪದ್ಮವನ್ನು ನಾಭಿಯಲ್ಲಿರಿಸಿಕೊಂಡಿರುವ ಪದ್ಮನಾಭನೇ! ನಿನ್ನನ್ನು ನಮಿಸುತ್ತೇನೆ. ತಾರತಮ್ಯದ ಕೊನೆಯಲ್ಲಿರುವುದರಿಂದ ಅತ್ಯಂತ ದೂರದವನೇ ! ದೂರದ ಬ್ರಹ್ಮಾಂಡದ ಹೊರಗೆ ಮತ್ತು ಒಳಗೂ ವ್ಯಾಪಿಸಿರುವವನೇ ! ದುರ್ಜನರಿಗೆ ಬಲುದೂರನೇ ! ತನ್ನ ಅವಯವ, ಗುಣ, ರೂಪ, ಕ್ರಿಯೆಗಳಿಗೆ ಭೇದರಹಿತನೇ! ಕರ್ಮಕ್ಕಿಂತ ಮಿಗಿಲಾದ ಅಪರೋಕ್ಷಜ್ಞಾನದಿಂದ ಸಂಸಾರಸಿಂಧುವನ್ನು ದಾಟಿದ ಮುಕ್ತರಿಗೂ ಆಶ್ರಯನೇ ! ಸುರಾರಿಗಳಾದ ಸುಯೋಧನಾದಿಗಳ ಪಕ್ಷವನ್ನುಕಾಪಾಡಿದ ಭೀಷ್ಮಾದಿಗಳ ತಪ್ಪನ್ನು ಪರಿಹರಿಸಿದವನೇ ! ಜಗದುದರನೇ! ದಾನಶೀಲರಾದ ಸಜ್ಜನರಿಗೆ ಮೋದ ನೀಡುವವನೇ ! ಜಿತೇಂದ್ರಿಯರಾದ ಭಗವದ್ಭಕ್ತರು ಸಮರ್ಪಿಸಿದ ನೀರು, ಎಲೆ, ಹೂ,ಹಣ್ಣುಗಳಿಂದಲೇ ಸಂತಸ ಪಡುವವನೇ ! ಬ್ರಹ್ಮಾದಿಗಳು ಲಯಗೊಳ್ಳುವ ಪ್ರಲಯಕಾಲದ ನೀರಲ್ಲಿ ರಮಿಸುವವನೇ ಬೆಣ್ಣೆ ಕದ್ದು ಯಶೋದೆಯಿಂದ ಉದರದಲ್ಲಿ ಹಗ್ಗದಿಂದ ಕಟ್ಟಿಸಿಕೊಂಡ ದಾಮೋದರನೇ ! ನಿನಗೆ ವಂದನೆ.

**ವಿವರಣೆ :**

೧. ಶುಭಸ್ಯ ಸಮಸ್ತ ಮಂಗಲಸ್ಯ ಉದ್ಭವಃ ಯಸ್ಮಾತ್ ಸಃ ತತ್ಸಂಬುದ್ಧಿಃ।

ತದುಕ್ತಂ ''ಸ್ಮೃತೇ ಸಕಲಕಲ್ಯಾಣಭಾಜನಂ ಯತ್ರ ಜಾಯತೇ।
ಪುರುಷಸ್ತಮಜಂ ನಿತ್ಯಂ ವ್ರಜಾಮಿ ಶರಣಂ ಹರಿಮ್॥

ಅ. ಶುಭಸ್ಯ ಅಪರಿಮಿತ ಕಲ್ಯಾಣಗುಣ ಸಂದೋಹಸ್ಯ ಉದ್ಭವಃ- ನಿತ್ಯಾಭಿವ್ಯಕ್ತಿಃ, ನಿತ್ಯಾಭಿವೃದ್ಧಿರ್ವಾ ಯಸ್ಯ ತತ್ಸಂಬುದ್ಧಿಃ।

ಆ. ಶುಭಾಃ- ಮುಕ್ತಿಯೋಗ್ಯಾಃ ಸಜ್ಜೀವಾಃ, ಉದ್ಗತಃ ಭವಃ ಸಂಸಾರಃ ಯೇಭ್ಯಸ್ತೇ ಉದ್ಭವಾಃ ಮುಕ್ತಾಃ ಯಸ್ಮಾತ್ ತತ್ಸಂಬುದ್ಧಿಃ।

ಇ. ಶುಭಾಃ- ಸಾಧೂನಾಂ ಶುಭಹೇತವಃ, ಉದ್ಭವಾಃ - ಉತ್ಕೃಷ್ಟಾವತಾರಾಃ ಯಸ್ಯ ತತ್ಸಂಬುದ್ಧಿಃ।

೨. ಸಂಭೃತಾಃ - ಪರಿಪುಷ್ಟಾಃ ಯೇ ಲೋಕಾಃ ಜನಾಃ ಅನಂತ ಜೀವರಾಶಯಃ- ತೇಷಾಂ ಭರಃ - ಭಾರಃ। ತಂ ಆಸಮಂತಾತ್ ಬಿಭರ್ತೀತಿ ಸಂಭೃತಲೋಕಭರಾಭರಃ। ತತ್ಸಂಬುದ್ಧಿಃ।

ಪರಿಪುಷ್ಟವಾದ ಅನಂತಜೀವರಾಶಿಗಳ ಭಾರವನ್ನು ಚೆನ್ನಾಗಿ ಭರಿಸಿರುವವನೇ!

ಅ. ಸಂಭೃತಾ: ಅನಂತಜೀವರಾಶಿಭರಿತಾಃ ಯೇ ಲೋಕಾಃ ಚತುರ್ದಶ ಭುವನಾನಿ। ತೇಷಾಂ ಯೋ ಭರಃ ತಂ ಆಸಮಂತಾತ್ ಬಿಭರ್ತೀತಿ ತತ್ಸಂಬುದ್ಧಿಃ।

ಆ. ಸಂಭೃತಾಃ ಸಮ್ಯಗ್ ಭೃತಾಃ ಯೇ ಲೋಕಾಃ - ಜನಾಃ ಲೋಕಾಃ ವಾ, ತೇಷಾಂ ಯಃ ಭರಃ- ತೇನ ನ ವಿದ್ಯತೇ ಭಾರಃ ಯಸ್ಯ, ತತ್ಸಂಬುದ್ಧಿಃ।

ಚೆನ್ನಾಗಿ ಧರಿಸಲ್ಪಟ್ಟ ಲೋಕಗಳ, ಅಲ್ಲಿರುವ ಜನರ ಭಾರವೂ ಭಾರವೆನಿಸದವನೇ! ಸಕಲಲೋಕಗಳನ್ನೂ ಸಾಸಿವೆಯನ್ನೆಂಬಂತೆ ಲೀಲೆಯಿಂದಲಿ ಧರಿಸಿದವನು ಎಂದು ಭಾವ.

ಇ. ಸಂಭೃತಾಃ ಧೃತಾಃ ಪುಷ್ಟಾ ವಾ ಲೋಕಭರಾಃ ಬ್ರಹ್ಮಾದಿಜನಸಮೂಹಾಃ ಯೇನ ತತ್ಸಂಬುದ್ಧಿಃ। ಸಂಭೃತಲೋಕಭರ ಇತಿ ಭಿನ್ನಂ ಪದಂ ವಾ। ಆಭರ ! ಆ ಸಮಂತಾತ್ ವಿಶ್ವಂ ಬಿಭರ್ತೀತಿ ತತ್ಸಂಬುದ್ಧಿಃ !

೩. ಪದ್ಮಂ - ಕಮಲಂ ನಯತಿ ವಿಕಾಸಂ ಪ್ರಾಪಯತೀತಿ ಪದ್ಮನಃ - ಸೂರ್ಯಃ। ತಸ್ಯ ಆಭಾ ಇವ ಆಭಾ ದೀಪ್ತಿಃ ಯಸ್ಯ ತಾದೃಶಃ।

ಸೂರ್ಯನಂತೆ ತೇಜಸ್ಸುಳ್ಳವನು.

ಅ. ಪದ್ಮಾ ಲಕ್ಷ್ಮೀಃ ಸಾ ಆಭಾ ಸನ್ನಿಭಾ ನ ಭವತೀತಿ ನಾಭಾ, ಅಸನ್ನಿಭಾ ಯಸ್ಯ ತತ್ಸಂಬುದ್ಧಿಃ। ಬ್ರಹ್ಮಾದ್ಯಪೇಕ್ಷಯಾ ಉತ್ಕೃಷ್ಟಾಯಾಃ ಲಕ್ಷ್ಮ್ಯಾಃ ಅಪಿ ಉತ್ಕೃಷ್ಟಃ ಇತ್ಯರ್ಥಃ।

ಬ್ರಹ್ಮಾದಿಗಳಿಂದ ಉತ್ತಮಳಾದ ಲಕ್ಷ್ಮೀದೇವಿಯಿಂದಲೂ ಉತ್ಕೃಷ್ಟ.

''ಅಹಂ ಸುವೇ ಪಿತರಮಸ್ಯ ಮೂರ್ಧನ್ ಮಮ ಯೋನಿರಪ್ಸ್ವಂತಃ ಸಮುದ್ರೇ'' ಇತಿ ಶ್ರುತೇಃ। ಪದ್ಮಾಶಬ್ದಸ್ಯ ಪುವಂದ್ಭಾವಃ ಛಾಂದಸಃ।

ಆ. ಪದ್ಮೇಷು - ಸಮಸ್ತಭೂತಹೃತ್ಪದ್ಮೇಷು ನಾಭಃ -ನಾಭಿರೇವ ನಾಭಃ ಸರ್ವಾಶ್ರಯಃ ತತ್ಸಂಬುದ್ಧಿಃ। ''ನಾಭಿರಿತ್ಯಭಿನಾಮಾ ಸ್ಯಾದ್ ಹರಿಃ ಸರ್ವಾಶ್ರಯೋ ಯತಃ'' ಇತಿ ಪ್ರಮಾಣಾತ್। ನ ಕೇವಲಂ ವ್ಯಾಪ್ತ ರೂಪವಾನೇವ ಸರ್ವಾಶ್ರಯಃ ಕಿಂತು ಸಕಲಜೀವಹೃದಯ ಕಮಲಸ್ಥಿತೇತರರೂಪ್ಯಪಿ ಸರ್ವಾಶ್ರಯಃ ಇತ್ಯರ್ಥಃ। ವ್ಯಾಪ್ತರೂಪನಂತೆ ಜೀವರ ಹೃದಯದೊಳಗಿನ ಅಣುರೂಪವೂ ಸರ್ವಾಶ್ರಯ.

ಇ. ಭಾಃ - ಪ್ರಕಾಶಃ ಜ್ಞಾನಂ ತದ್ವಿರೋಧಿತ್ವಾದಭಾ - ಅಜ್ಞಾನಂ, ತಸ್ಯ ನಿವರ್ತಕತ್ವೇನ ನಿರೋಧಿತ್ವಾತ್ ನಾಭಾ - ಅಪರೋಕ್ಷಜ್ಞಾನಂ। ಪದ್ಮೇ -. ಭಕ್ತಹೃತ್‌ಪದ್ಮೇ ನಾಭಾ - ಅಪರೋಕ್ಷ ಜ್ಞಾನಂ ಯಸ್ಮಾತ್ ಸಃ ತತ್ಸಂಬುದ್ಧಿಃ।

ಭಕ್ತರ ಹೃದಯ ಕಮಲದಲ್ಲಿ ಅಪರೋಕ್ಷ ಜ್ಞಾನವೀಯುವವನು.

ಉ. ಪದ್ಮಂ ನಾಭೌ ಯಸ್ಯೇತಿ ವಾ ಪದ್ಮನಾಭಃ। ತತ್ಸಂಬುದ್ಧಿಃ ಹೇ ಪದ್ಮನಾಭ।
''ಅಜಸ್ಯ ನಾಭಾವಧ್ಯೇಕಮರ್ಪಿತಂ ಯಸ್ಮಿನ್ ವಿಶ್ವಾನಿ ಭುವನಾನಿ ತಸ್ಥುಃ।''
ಋ.ವೇ. ೧೦-೮೨-೬

ನಾಭಿಯಲ್ಲಿ ಲೋಕಾಧಾರವಾದ ಕಮಲವುಳ್ಳವನು.

ಳ. ದೂರತರಾಂತರ - ಭಗವತಃ ಅನಂತಾನಂತ ಗುಣವತ್ವಾತ್ ತಾರತಮ್ಯಕ್ರಮೇ 'ಅತ್ಯಂತ ದೂರೋ ಹರಿಃ' ಇತಿ ದೂರತರಾಂತರೇತ್ಯುಕ್ತಂ । ತಥಾ ಚ ಗೀತಾಭಾಷ್ಯೋದಾಹೃತ ಶೈವಸ್ಕಾಂದವಚನಂ-

ಯದಂತರಂ ವ್ಯಾಘ್ರಹರೀಂದ್ರಯೋರ್ವನೇ
ಯದಂತರಂ ಮೇರುಗಿರೀಂದ್ರವಿಂಧ್ಯಯೋಃ।

ಯದಂತರಂ ಸೂರ್ಯಸುರೇಡ್ಯಬಿಂಬಯೋಃ
ತದಂತರಂ ರುದ್ರಮಹೇಂದ್ರಯೋರಪಿ॥
ಯದಂತರಂ ಸಿಂಹಗಜೇಂದ್ರಯೋರ್ವನೇ
ಯದಂತರಂ ಸೂರ್ಯಶಶಾಂಕಯೋರಪಿ।
ಯದಂತರಂ ಜಾಹ್ನವಿ ಸೂರ್ಯಕನ್ಯಯೋಃ
ತದಂತರಂ ಬ್ರಹ್ಮಗಿರೀಶಯೋರಪಿ॥
ಯದಂತರಂ ಪ್ರಲಯಜವಾರಿವಿಪ್ರುಷೋಃ
ಯದಂತರಂ ಸ್ತಂಬ ಹಿರಣ್ಯಗರ್ಭಯೋಃ॥
ಅನಂತತ್ವಾನ್ ಮಹಾವಿಷ್ಣೋಸ್ತದಂತರಮನಂತಕಂ।
ಮಾಹಾತ್ಮ್ಯಸೂಚನಾರ್ಥಾಯ ಹ್ಯುದಾಹರಣಮೀರಿತಮ್।
ನ ಸಮೋ ಹ್ಯಧಿಕೋ ವಾಪಿ ನಾಸ್ತಿ ಕಶ್ಚಿತ್ ಕದಾಚನ।
ಏತೇನ ಸತ್ಯವಾಕ್ಯೇನ ತಮೇವ ಪ್ರವಿಶಾಮ್ಯಹಮ್ ॥ ಇತಿ ॥

೮. ದೂರತರಃ ಅಸತಾಮತಿದೂರಃ। ಅಂತರಃ - ಅಂತಃಸ್ಥಿತಃ। ದೂರತರಶ್ಚಾಸೌ ಅಂತರಶ್ಚ ದೂರತರಾಂತರಃ। ಬ್ರಹ್ಮಾಂಡಾಂತರ್ಬಹಿಶ್ಚ ವ್ಯಾಪ್ತಃ ಇತ್ಯರ್ಥಃ। ''ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ'' ಇತಿ ಶ್ರುತೇಃ। ತತ್ಸಂಬುದ್ಧಿಃ।

೮. ಅಸತಾಂ ದೂರತರಮಂತರಮವಕಾಶೋ ಯಸ್ಯ ತತ್ಸಂಬುದ್ಧಿಃ।
ಅಸತಾಮತ್ಯಂತಂ ದೂರ ಇತ್ಯರ್ಥಃ।
ಅಂತರಂ ಸ್ವಗುಣಕ್ರಿಯಾದಿಭಿಃ ಭೇದೋಽಸ್ಮಿನ್ ಇತಿ ತತ್ಸಂಬುದ್ಧಿಃ।

೫. ಪರಸ್ಮಾತ್ ಕರ್ಮಾದೇಃ ಉತ್ತಮಾತ್ ಜ್ಞಾನಾತ್ ನಿಮಿತ್ತಾತ್ ದಾರಿತಪಾರಗಪಾರ ! ದಾರಿತಃ - ವಿದಶಿತಃ ಯಃ ಭವಸಿಂಧುಃ ತಸ್ಯಪಾರಗಾಃ ಪಾರಂಗತಾಃ ಮುಕ್ತಾಃ ತೇಷಾಂ ಪಾರ-ತೀರ! ಮುಕ್ತಾಶ್ರಯ ಇತ್ಯರ್ಥಃ।

೮. ಪರಾಣಾಮಿಂದ್ರಿಯಶತ್ರೂಣಾಂ ಇದಂ ಪಾರಂ ಪಕ್ಷಂ ಗಚ್ಛಂತೀತಿ ಪಾರಗಾಃ ದುರ್ಯೋಧನಾದಯಃ। ತಾನ್ ಪಾಂತೀತಿ ಪಾರಗಪಾಃ ಭೀಷ್ಮದ್ರೋಣಾದಯಃ। ತೇಷಾಮರಾಃ ದೋಷಾಃ ಪಾರಗಪಾರಾಃ। ದಾರಿತಾ ಪಾರಗಪಾರಾಃ ಯೇನ ತತ್ಸಂಬುದ್ಧಿಃ।

೬. ದಾಮೋದರ - ದಾಮ ಜಗತ್ ಉದರೇ ಯಸ್ಯ ತತ್ಸಂಬುದ್ಧಿಃ।
'ದಾಮಾನಿ ಲೋಕನಾಮಾನಿ' ಇತ್ಯಭಿಧಾನಾತ್।

ಅ. ದದತೀತಿ ದಾಃ - ಸಂಪದ್ದಾನಶೀಲಾಃ ಸಜ್ಜನಾಃ, ತೇಷಾಂ ಮೋದಂ - ಸುಖಂ ರಾತೀತಿ 'ರಾ ದಾನೇ' ಇತಿ ಧಾತೋಃ। ತತ್ಸಂಬುದ್ಧಿಃ।

ಆ. ದಮಃ - ಇಂದ್ರಿಯನಿಗ್ರಹಃ। ತತ್ಸಂಬಂಧಿನೋ ದಾಮಾಃ। ದಮಯತಿ ಮರ್ದಯತಿ ದೈತ್ಯಾನಿತಿ ದಾಮಃ ವಿಷ್ಣುಃ। ''ಉಗ್ರಮುಗ್ರಂ ದಮಾಯನ್ನಿ''ತಿ ಶ್ರುತೇಃ। - ತತ್ಸಂಬಂಧಿನಃ ದಾಮಾಃ। ಭಗವದ್ಭಕ್ತಜನಾಃ। ತೇಷಾಮುದೇನ ತತ್ಸಮರ್ಪಿತೋದಕೇನ, ಉಪಲಕ್ಷಣಮೇತತ್, ''ಪತ್ರಂ ಪುಷ್ಪಂ ಫಲಂ ತೋಯಮಿ''ತಿ ಪತ್ರಪುಷ್ಪಫಲಾದಿನಾ ರಮತೇ ಪರಿತುಷ್ಯತೀತಿ ದಾಮೋದರಃ। ತಥಾಚೋಕ್ತಂ - ''ಪರಿಜನಾನುರಾಗ ವಿರಚಿತ ಸ್ತವಲವ ಸುಶಬ್ದ ಸಲಿಲ ಕಿಸಲಯ ತುಲಸೀದೂರ್ವಾಙ್ಕುರೈರಪಿ ಸಂಭೃತಯಾ ಸಪರ್ಯಯಾ ಪರಮ! ಕಿಲ ಪರಿತುಷ್ಯಸೀತಿ।''

ಇ. ದಮ್ಯಂತೇ ಹರಿಣಾ ಹನ್ಯಂತೇ ಬ್ರಹ್ಮಾದಯೋಽಸ್ಮಿನ್ನಿತಿ ದಮಃ - ಪ್ರಲಯ ಕಾಲಃ ತಸ್ಯ ಸಂಬಂಧಿ ದಾಮಂ। ತಚ್ಚೋದಂ ಚ ದಾಮೋದಂ ಪ್ರಲಯ ಜಲಂ। ತಸ್ಮಿನ್ ರಮತೇ ಇತಿ ದಾಮೋದರಃ।

ಈ. ನವನೀತಹರಣೇ ಕೃತೇ ಯಶೋದಯಾ ಬದ್ಧಂ ದಾಮ ಉದರೇ ಯಸ್ಯೇತಿ ತತ್ಸಂಬುದ್ಧಿಃ।

**ಆನಂದತೀರ್ಥಮುನೀಂದ್ರಕೃತಾ**
**ಹರಿಗೀತಿರಿಯಂ ಪರಮಾದರತಃ।**
**ಪರಲೋಕವಿಲೋಕನ ಸೂರ್ಯನಿಭಾ**
**ಹರಿಭಕ್ತಿವಿವರ್ಧನಶೌಂಡತಮಾ ॥ ೮ ॥**

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ ದ್ವಾದಶಸ್ತೋತ್ರೇ ಪಂಚಮೋಧ್ಯಾಯಃ॥**

ಆನಂದತೀರ್ಥ ಮುನೀಂದ್ರರು ರಚಿಸಿದ ಈ ಶ್ರೀಹರಿಯ ಹಾಡು ಪರಮಾದರದಿಂದ ಪಠಿಸಿದವರಿಗೆ ವೈಕುಂಠದ ದರ್ಶನ ಮಾಡಿಸುವುದರಲ್ಲಿ ಸೂರ್ಯನಂತೆ ಬೆಳಕು ತೋರುವುದು. ಶ್ರೀಹರಿಯಲ್ಲಿ ಭಕ್ತಿಯನ್ನು ಅಭಿವೃದ್ಧಿಪಡಿಸುವುದರಲ್ಲಿ ಇದು ಅತ್ಯಂತ ಸಮರ್ಥ.

**॥ ಇತಿ ಪಂಚಮೋಽಧ್ಯಾಯಃ ॥**

# ಷಷ್ಠೋಽಧ್ಯಾಯಃ

**ದೇವಕಿನಂದನ ನಂದಕುಮಾರ ವೃಂದಾವನಾಂಚನ ಗೋಕುಲಚಂದ್ರ।**
**ಕಂದಫಲಾಶನ ಸುಂದರರೂಪ ನಂದಿತಗೋಕುಲ ವಂದಿತಪಾದ ॥೧॥**

ದೇವಕಿಗೆ ಸಂತಸವನಿತ್ತವನೆ ! ನಂದಗೋಪನ ಕುಮಾರನೆ ! ವೃಂದಾವನದಿ ಸಂಚರಿಸಿದವನೆ ! ವೃಂದಾವನಕೆ ಹಿರಿಮೆ ತಂದವನೆ ! ನಂದಗೋಕುಲಕ್ಕೆ ಚಂದಿರನಂತಿಹನೆ ! ಗೆಡ್ಡೆಗೆಣಸುಗಳ, ಹಣ್ಣು ಹಂಪಲುಗಳ ತಿಂದವನೆ ! ಸುಂದರಾಂಗನೆ ! ಗೋವುಗಳ ವೃಂದಕೆ ಆನಂದವಿತ್ತವನೆ ! ನಾರದಾದಿ ಮುನಿಗಡಣದಿಂದ ವಂದಿತನೆ ! ನಿನಗೆ ನಮನವು.

**ವಿವರಣೆ:** ''ನಂದಕುಮಾರಾ'', 'ವೃಂದವನಾಂಜನ', 'ಸುಂದರರೂಪಾ' - ಹ್ಯ.ಪಾ.ದಲ್ಲಿ ಇದು ಏಳನೇ ಸ್ತೋತ್ರ.

ದೇವಕಿನಂದನ - ಭಗವಂತನನ್ನೆ ಸುತನನ್ನಾಗಿ ಪಡೆಯಬೇಕೆಂದು ಕಶ್ಯಪರೊಂದಿಗೆ ತಪಸ್ಸುಗೈದ ಅದಿತಿಯೇ ದೇವಕೀದೇವಿ. ಆಕೆಯ ಮಗನಾಗಿ ಅವತರಿಸಿ ಶ್ರೀಕೃಷ್ಣ ಸಂತಸ ನೀಡಿದ. ಕಂಸನ ಕಾರಾಗೃಹದ ಬಂಧನದಿಂದ ಆಕೆಯನ್ನು ಬಿಡುಗಡೆಗೊಳಿಸಿದನು. ಮುಂದೆ ದೇವಕಿಯು ತನ್ನ ಆರು ಜನ ಮೃತಪುತ್ರರ ದರ್ಶನವನ್ನು ಬಯಸಿದಾಗ ಅವರನ್ನು ತಂದು ತೋರಿಸಿದನು. ಹೀಗೆ ನಾನಾ ಬಗೆಯಾಗಿ ದೇವಕಿಯನ್ನು ಸಂತೋಷ ಪಡಿಸಿ 'ದೇವಕೀನಂದನ' ಎನಿಸಿರುವನು.

ದೇವ-ದೇವನೇ ! ಕಿನಂದನ-ಮುಕ್ತರಿಗೆ ಸಂತಸದಾಯಿಯೇ ! ಎಂದೂ ಅರ್ಥೈಸಬಹುದು. 'ಕ' ಎಂದರೆ ಸುಖ. ಅದು ಉಳ್ಳ ಮುಕ್ತರು 'ಕಿ'. ಅವರನ್ನು ಸಂತೋಷಪಡಿಸುವುದರಿಂದ 'ಕಿನಂದನ'.

ನಂದಕುಮಾರ- ವಸುದೇವನ ನಂದನನಾಗಿ ಅವತರಿಸಿದ ಶ್ರೀಕೃಷ್ಣ ನಂದಗೋಪನ ಮಗನೆಂದು ಬಾಲ್ಯದಲ್ಲಿ ಪ್ರಸಿದ್ಧನಾದನು.

ನಂದೇ ಕುಃ - ಕುತ್ಸಿತಃ ಮಾರಃ ಯೇನ ಸಃ ನಂದಕುಮಾರಃ।

ಆನಂದದ ವಿಷಯದಲ್ಲಿ ಮನ್ಮಥನನ್ನು ತಿರಸ್ಕರಿಸಿದವನು. ಮಾರಜನಕ ತಾನೆ ಶ್ರೀಕೃಷ್ಣ?

ವೃಂದಾವನಾಂಚನ - ಗೋಪಗೋಪೀಗವಾಂ ವೃಂದಸ್ಯ ಅವನಂ ಯತ್ರ ವೈ ಹರೇಃ। ಯದ್ವಾ ತದ್ವೃಂದಂ ಸೇವ್ಯಮ್ (ನರಹರಿತೀರ್ಥರು)

ಗೋಪಗೋಪಿ ಗೋವುಗಳ 'ವೃಂದ'- ಸಮೂಹದ 'ಅವನ' - ರಕ್ಷಣೆ ಎಲ್ಲಿ ಆಗುವುದೋ ಅದು ವೃಂದಾವನ ಅಥವಾ ಗೋಪಗೋಪಿಗೋವುಗಳ ಸಮೂಹದಿಂದ ಸಂಸೇವ್ಯವಾದ ವನ-ವೃಂದವನ.

ವೃಂದಾವನೇ ಅಂಚನಂ ಸಂಚಾರಃ ಯಸ್ಯ ಸಃ ವೃಂದಾವನಾಂಚನಃ।

ವೃಂದಾವನದಲ್ಲಿ ಸಂಚರಿಸಿದವನು. (ಭಾಗವತ)

''ಅಟತಿ ಯದ್ಭವಾನಹ್ನಿ ಕಾನನಂ ತ್ರುಟಿಯುಗಾಯತೇ ತ್ವಾಮಪಶ್ಯತಾಮ್''
(ಭಾಗವತ)

ವೃಂದಾವನಸ್ಯ ಅಂಚನಂ-ಪೂಜನಂ ಯೇನ ಸಃ ವೃಂದಾವನಾಂಚನಃ।

ವೃಂದಾವನಕ್ಕೆ ತನ್ನ ಸನ್ನಿಧಾನದಿಂದ ಹಿರಿಮೆ ಗೌರವಗಳನ್ನು ತಂದವನು.

''ಜಯತಿ ತೇऽಧಿಕಂ ಜನ್ಮನಾ ವ್ರಜಃ'' (ಭಾಗವತ)

''ಅಂಚು ಗತಿಪೂಜನಯೋಃ'' ಇತಿ ಧಾತು ವ್ಯಾಖ್ಯಾನಮ್।

ನಂದಿತ ಗೋಕುಲ - ಅನೇಕ ಬಾಲಲೀಲೆಗಳ ಮೂಲಕ ಹಾಗೂ ಅಸುರ ಸಂಹಾರಾದಿಗಳ ಮೂಲಕವೂ ನಂದಗೋಕುಲಕ್ಕೆ ಆನಂದ ನೀಡಿದವನು.

''ಕೃಷ್ಣೋऽಪಿ ಲೀಲಾಃ ಲಲಿತಾಃ ಪ್ರದರ್ಶಯನ್ ಬಲದ್ವಿತೀಯೋ
ರಮಯಾಮಾಸ ಗೋಷ್ಠಮ್'' (ಮ.ಭಾ.ತಾ.ನಿ. ೧೨-೧೧೩)

**ಇಂದ್ರಸುತಾವಕ ನಂದಕಹಸ್ತ**
**ಚಂದನಚರ್ಚಿತ ಸುಂದರಿನಾಥ।**
**ಇಂದೀವರೋದರದಲನಯನ**
**ಮಂದರಧಾರಿನ್ ಗೋವಿಂದ ವಂದೇ ॥ ೨ ॥**

ಇಂದ್ರಸುತನಾದ ಪಾರ್ಥನನ್ನು ಕಾಪಾಡಿದವನೆ! ನಂದಕ ಎಂಬ ಖಡ್ಗವನ್ನು ಹಿಡಿದವನೇ! ಗೋವರ್ಧನವನೆತ್ತಿ ವ್ರಜಜನರ ಸಂತಸಪಡಿಸಿದ ಕೈಯವನೆ! ಪರಿಮಳದ ಗಂಧವ ಪೂಸಿಕೊಂಡವನೆ! ಹದಿನಾರು ಸಾವಿರದ ನೂರೆಂಟು ನಾರಿಯರ ನಾಥನೆ! ನೀಲತಾವರೆಯ ನಡು ಎಸಳಿನಂಥ ನಯನದವನೆ! ಮಂದರವ ಪೊತ್ತವನೆ! ವೇದವೇದ್ಯನೆ, ನಿನಗೆ ವಂದನೆಯು.

**ವಿವರಣೆ:** ಇಂದ್ರಸುತಾವಕ-ಇಂದ್ರಸುತನಾದ ಅರ್ಜುನನನ್ನು ಸಂರಕ್ಷಣೆ ಮಾಡಿದವನು.

'ಜಗಾಮ ಬಾಥೋ ಶರಣಂ ಜನಾರ್ದನಂ
ಸುರೈರ್ವೃತೋ ದೇವಪತಿಃ ಕ್ಷಮಾಪಯನ್।
. . . ಯಯಾಚ ಚೈನಂ ಪರಿರಕ್ಷಣಾಯ
ಶಚೀಪತಿಃ ಕೇಶವಮರ್ಜುನಸ್ಯ।
ಜಗಾದ ಕೃಷ್ಣೋಽಪಿ ಧರಾತಲಸ್ಥಿತೇ
ನ ಮಯ್ಯಮುಂ ಕಶ್ಚನ ಜೇಷ್ಯತೀತಿ॥'
(ಮ.ಭಾ.ತಾ.ನಿ. ೨೦-೧೩೩, ೧೩೪)

ಶ್ರೀಕೃಷ್ಣನು ನರಕಾಸುರನನ್ನು ಸಂಹಾರ ಮಾಡಿ ಅವನು ಅಪಹರಿಸಿದ್ದ ದೇವತೆಗಳ ಸಂಪತ್ತನ್ನು ದೇವಲೋಕಕ್ಕೆ ಹೋಗಿ ಇಂದ್ರಾದಿಗಳಿಗೆ ಕೊಟ್ಟನು. ಬಳಿಕ ಸತ್ಯಭಾಮಾದೇವಿಯ ಅಪೇಕ್ಷೆಯಂತೆ ನಂದನವನದಲ್ಲಿ ವಿಹರಿಸುತ್ತ ಅಲ್ಲಿದ್ದ ಪಾರಿಜಾತ ವೃಕ್ಷವನ್ನು ಕೊಂಡೊಯ್ಯಲು ಉದ್ಯುಕ್ತನಾದನು. ಆಗ ದೇವತೆಗಳೆಲ್ಲ ಇಂದ್ರನನ್ನು ಮುಂದಿರಿಸಿಕೊಂಡು ಅಸುರಾವೇಶದಿಂದ ಯುದ್ಧಕ್ಕೆ ಬಂದರು. ಭಗವಂತನು ಇಂದ್ರನನ್ನು, ಅವನ ಪರವಾಗಿ ಯುದ್ಧ ಮಾಡಲು ಬಂದ ಶಿವನನ್ನು, ಇತರ ದೇವತೆಗಳನ್ನು ಪರಾಭವಗೊಳಿಸಿದನು. ಅಸುರಾವೇಶದಿಂದ ಮುಕ್ತನಾದ ದೇವೇಂದ್ರ ಭಗವಂತನಲ್ಲಿ ಕ್ಷಮಾಪಣೆ ಕೇಳಿದನು. ಎಲ್ಲ ಸುರರೊಂದಿಗೆ ಜನಾರ್ದನನಲ್ಲಿ ಶರಣಾದನು. ತನ್ನ ಪುತ್ರನಾದ ಅರ್ಜುನನನ್ನು ಸಂರಕ್ಷಣೆ ಮಾಡಬೇಕೆಂದು ಶ್ರೀಕೃಷ್ಣನಲ್ಲಿ ದೇವೇಂದ್ರನು ಪ್ರಾರ್ಥಿಸಿದನು. ಶ್ರೀಕೃಷ್ಣನೂ ಭರವಸೆಯಿತ್ತನು. ''ನಾನು ಈ ಭೂಮಿಯಲ್ಲಿ ದೃಗ್ಗೋಚರನಾಗಿರುವವರೆಗೆ ಯಾರೂ ಅರ್ಜುನನನ್ನು ಸೋಲಿಸಲಾರರು. ಹೀಗೆ ಶ್ರೀಕೃಷ್ಣನು ಇಂದ್ರಸುತನಾದ ಅರ್ಜುನನಿಗೆ 'ಅವಕ'-ರಕ್ಷಕನಾಗಿರುವನು.

ನಂದಕಹಸ್ತ- 'ನಂದಕಹಸ್ತಾ' ಹ್ಯಪಾ. 'ನಂದಕ' ಎಂಬ ಖಡ್ಗವನ್ನು ಕೈಯಲ್ಲಿ ಧರಿಸಿದವನು. ತನ್ನ ಕೈಯಿಂದ ಗೋವರ್ಧನ ಪರ್ವತ ಎತ್ತಿ ಹಿಡಿದು ಇಂದ್ರ ಸುರಿಸಿದ ಮಳೆಯಿಂದ ವ್ಯಾಕುಲರಾಗಿದ್ದ ಗೋಗೋಪಾಲಕರನ್ನು ಸಂರಕ್ಷಣೆ ಮಾಡಿ ಸಂತೋಷ ಪಡಿಸಿದವನು.

ನಂದಕಃ ಹಸ್ತೇ ಯಸ್ಯ ಸಃ ನಂದಕಹಸ್ತಃ - ತತ್ಸಂಬುದ್ಧಿಃ। (ವಿ.ಪ.)

ನಂದಕೌ - ಕುಲಪಾವಕೌ, ಅಭಯಪ್ರದೌ ಇತಿ ಯಾವತ್, ಹಸ್ತೌ ಯಸ್ಯ ಸಃ। ತತ್ಸಂಬುದ್ಧಿಃ। ''ನಂದಕಃ ಕುಲಪಾಲಕೇ ಹರ್ಷಕೇ ವಿಷ್ಣುಖಡ್ಗೇ ಚ॥' ಇತಿ ಹೈಮಃ। 'ದಳನಯನಾ', 'ಮಂದರಧಾರಾ' - ಹ್ಯಪಾ.

ಮಂದರಧಾರಿನ್ - ಮಂದಾನ್ - ವಿವೇಕಜ್ಞಾನಶೂನ್ಯಾನ್ ಪಶೂನ್ ತೃಣಜಲಾದಿನಾ ರಮಯತೀತಿ ಮಂದರಃ ಗೋವರ್ಧನಾದಿಃ। ತಂ ಧಾರಯತಿ। ತಚ್ಛೀಲ ಇತಿ ಮಂದರಧಾರೀ, ತತ್ಸಂಬುದ್ಧಿಃ। ಕೃಷ್ಣಸ್ಯ ಮಂದರಧಾರಿತ್ವಾಭಾವಾತ್ ಇತ್ಥಂ ವ್ಯಾಖ್ಯಾತಮ್। ಯದ್ವಾ ಅಜಿತರೂಪೇಣ ಮಂದರಧಾರಿನ್ ಇತಿ ವಾ। (ವಿ.ಪ.)

ಮಂದ-ವಿವೇಕ ಜ್ಞಾನಶೂನ್ಯಗಳಾದ ಪಶುಗಳನ್ನು 'ರ'-ಹುಲ್ಲು ನೀರುಗಳಿಂದ ಸಂತೋಷ ಪಡಿಸುವ ಗೋವರ್ಧನ ಪರ್ವತ - ಮಂದರ. ಅದನ್ನು ಹೊತ್ತವನೇ! ಶ್ರೀಕೃಷ್ಣನು ಮಂದರಪರ್ವತ ಹೊತ್ತಿರದ ಕಾರಣ ಮಂದರ ಪದಕ್ಕೆ ಹೀಗೆ ಅರ್ಥ ಮಾಡಬೇಕು. ಅಥವಾ ಅಜಿತರೂಪದಿಂದ ಮಂದರವ ಹೊತ್ತವನೆಂದೂ ಹೇಳಬಹುದು.

''ಚಂದನ ಚರ್ಚಿತ ಸುಂದರಿನಾಥ'' - ಎಂದು ಸಮಸ್ತಪದವಾಗಿಯೂ ಭಾವಿಸಿ ಹೀಗೆ ವ್ಯಾಖ್ಯಾನಿಸಬಹುದು - ಚರ್ಚಿತಂ - ಚರ್ಚನಂ। ಚಂದನ ಚರ್ಚಿತೇನ ಸುಂದರ್ಯಾಃ ಕುಬ್ಜಾಯಾಃ ನಾಥ ಇತಿ ವಾ. (ಸಿ.ಎಂ.ಪ.) ಗಂಧಲೇಪನದಿಂದ ಕುಬ್ಜೆಗೆ ಅನುಗ್ರಹಿಸಿದ ಸ್ವಾಮಿ ಎಂದು ಅರ್ಥ. (ಕುಬ್ಜಾಗಂಧಾನುಲಿಪ್ತಾಂಗಃ)

ಈ ಸ್ತೋತ್ರದಲ್ಲಿ ಭಗವಂತನ ಹತ್ತವತಾರದ ಮಹಿಮೆಯನ್ನು ಸ್ತುತಿಸಿ, ಕೊನೆಯಲ್ಲಿ ನಾರಾಯಣ ರೂಪದ ಸ್ತುತಿಯನ್ನು ಮಾಡಲಾಗಿದೆ. ಕೆಲವು ಪಾಠಗಳಲ್ಲಿ ''ದೇವಕಿನಂದನ . . '' ಎಂದು ಕೃಷ್ಣಸ್ತೋತ್ರದ ಆರಂಭವಿದ್ದರೆ ಮತ್ತೆ ಹಲವು ಪಾಠಗಳಲ್ಲಿ ''ಮತ್ಸ್ಯಕ ರೂಪ . . . '' ಎಂದು ಮತ್ಸ್ಯಾವತಾರದ ಸ್ತುತಿಯಿಂದ ಪ್ರಾರಂಭಗೊಳಿಸಲಾಗಿದೆ.

ಈ ಸ್ತೋತ್ರದ ಬಗ್ಗೆ ಹೀಗೆ ಐತಿಹ್ಯವಿದೆ - ಶ್ರೀಮಧ್ವಾಚಾರ್ಯರು ಶ್ರೀಕೃಷ್ಣನ ಪ್ರತಿಮೆಯನ್ನು ಉಡುಪಿಗೆ ತರಲು ಹೋಗುವಾಗ ಈ ದ್ವಾದಶ ಸ್ತೋತ್ರಗಳ ಐದು ಅಧ್ಯಾಯಗಳನ್ನು ಪಠಿಸುತ್ತ ಹೋದರು. ಕಡಲಿನ ಬಳಿ ಕೃಷ್ಣನನ್ನು ಕಂಡ ಕೂಡಲೆ ''ದೇವಕಿನಂದನ . . . ದೈವತಾನಂದ ಸಂಪೂರ್ಣ'' ಎಂಬ ಪದ್ಯಗಳು ಹೊಮ್ಮಿದವು. ಮುಂದೆ ''ಮತ್ಸ್ಯಕ ರೂಪ . . . '' ಎಂಬ ಪದ್ಯಗಳನ್ನು ರಚಿಸಿದರು.

**ಚಂದ್ರಶತಾನನ ಕುಂದಸುಹಾಸ ನಂದಿತದೈವತಾನಂದಸುಪೂರ್ಣ ॥ ೩ ॥**

ನೂರಾರು ಚಂದಿರನ ಸೊಬಗ ಮೊಗದವನೆ । ಜಾಜಿ ಹೂವಿನ ಸೊಗಸ ಮುಗುಳ್ನಗೆಯವನೆ! ನರಕಾಸುರಾದಿಗಳ ಸದೆದು ದೇವತೆಗಳಿಗೆ ಸಂತಸವಿತ್ತವನೆ! ಆನಂದಸುಪೂರ್ಣನೆ! ನಿನಗೆ ನಮನ.

**ವಿವರಣೆ:**- ನಂದಿತದೈವತ - ಭೂಭಾರ ಪರಿಹರಿಸಿ ದೇವತೆಗಳ ಸಂತೈಸಿದವನೆ! ಅಥವಾ ನರಕಾಸುರ ನಿಗ್ರಹಾದಿಗಳಿಂದ ದೇವತೆಗಳಿಗೆ ಮುದವನಿತ್ತವನೆ ।

ನಂದಿತಾನಿ ನರಕಾಸುರ ನಿಗ್ರಹಾದಿನಾಽಽನಂದಂ ಪ್ರಾಪಿತಾನಿ
ದೈವತಾನಿ ದೇವಾಃ ಯೇನ ತತ್ಸಂಬುದ್ಧಿಃ । (ವಿ.ಪ.)

**ಮತ್ಸ್ಯಕರೂಪ ಲಯೋದವಿಹಾರಿನ್**
**ವೇದವಿನೇತೃ ಚತುರ್ಮುಖ ವಂದ್ಯ ॥ ೪ ॥**

ಚಾಕ್ಷುಷಮನ್ವಂತರದಲ್ಲಿ ಪ್ರಲಯ ಸಮುದ್ರದಲ್ಲಿ ವಿಹರಿಸುವವನೇ । ಸಕಲವೇದ ಪ್ರವರ್ತಕನೇ । ನಾಲ್ಮೊಗನಿಂದ ಸ್ತುತ್ಯನೆ ! ಸುಖರೂಪವಾದ ಮತ್ಸ್ಯಾವತಾರಿಯೇ ! ನಿನಗೆ ವಂದನೆ.

**ವಿವರಣೆ:** 'ವೇದವಿನೇತ್ರ' (ಹ.ಪಾ.) ಸತ್ಯವ್ರತರಾಜನು ಒಂದು ದಿನ ಕೃತ ಮಾಲಾ ನದಿಯಲ್ಲಿ ಜಲಾಂಜಲಿ ನೀಡುತ್ತಿರುವಾಗ ಬೊಗಸೆಯಲ್ಲಿ ಮೀನು ಕಂಡಿತು. ರಾಜನು ಕೈಚೆಲ್ಲಿದ. 'ನನ್ನನು ಕಾಪಾಡು' ಎಂದು ಮಾತನಾಡಿತು ಮೀನು. ದಯೆಯಿಂದ ತಂಬಿಗೆಯಲ್ಲಿ ಹಾಕಿಕೊಂಡು ಆಶ್ರಮಕ್ಕೆ ತೆರಳಿದ. ತಂಬಿಗೆಯಲ್ಲೂ ಬೆಳೆದು ಸ್ಥಳ ಸಾಲದೆ ನನ್ನನ್ನು ಸ್ಥಳಾಂತರಿಸೆಂದು ತಿಳಿಸಿತು. ಇನ್ನೂ ದೊಡ್ಡ ಪಾತ್ರೆ. ಹಾಗೆಯೇ ಅದು ಸಾಲದೆನಿಸಿದಾಗ ಸರೋವರದಲ್ಲಿ ಹಾಕಿದನು. ಅಲ್ಲೂ ಬೆಳೆಯಿತು. ಆಗ ರಾಜನು ಅದು ನಾರಾಯಣನದೇ ರೂಪವೆಂದರಿತು ಸ್ತುತಿಸಿದನು. ಪ್ರಸನ್ನನಾದ ಶ್ರೀಹರಿ ''ಇಂದಿನಿಂದ ಏಳನೇ ದಿವಸದಲ್ಲಿ ನಡೆಯುವ ಪ್ರಲಯದ ಉದಕದಲ್ಲಿ ಮೂರ್ಲೋಕವೂ ಮುಳುಗುವುದು. ನೌಕೆಯೊಂದನ್ನು ಕಳುಹಿಸುತ್ತೇನೆ. ಅದರಲ್ಲಿ ಸಪ್ತರ್ಷಿಗಳೊಂದಿಗೆ ಎಲ್ಲಾ ಔಷಧಿ ಬೀಜಗಳನ್ನಿರಿಸಿ ಕೂಡು. ಅಂದು ನಾನು ಮತ್ತೆ ಕಾಣಿಸಿಕೊಳ್ಳುತ್ತೇನೆ. ನನ್ನ ತಲೆಯ ಮೇಲಿನ ಬಂಗಾರದ ಕೊಂಬಿಗೆ ನೌಕೆಯನ್ನು ಸಿಕ್ಕಿಸು'' ಎಂದನು. ಮತ್ಸ್ಯಾವತಾರಿಯ ಆಜ್ಞೆಯಂತೆ ಸತ್ಯವ್ರತನು

ನಡೆದುಕೊಂಡನು. ಬ್ರಹ್ಮದೇವರ ಒಂದು ರಾತ್ರಿಯವರೆಗೆ ಆ ನೌಕೆಯಲ್ಲಿ ವಿಹರಿಸಿದನು. ಆಗ ಸತ್ಯವ್ರತ ರಾಜನಿಗೆ ನೀಡಿದ ತತ್ತ್ವೋಪದೇಶವೆ ''ಮತ್ಸ್ಯ ಪುರಾಣಸಂಹಿತಾ'' ಎಂದು ಪ್ರಸಿದ್ಧವಾಯಿತು.

ಅತೀತೇ ಪ್ರಲಯಾಪಾಯೇ ಉತ್ಥಿತಾಯ ಚ ವೇಧಸೇ।
ಹತ್ವಾಸುರಂ ಹಯಗ್ರೀವಂ ವೇದಾನ್ ಪ್ರತ್ಯಾಹರದ್ಧರಿಃ॥
(ಭಾಗವತ ೮-೩೩-೫೭)

ಪ್ರಲಯ ಕಳೆದ ಬಳಿಕ ಹಯಗ್ರೀವಾಸುರನನ್ನು ಸಂಹರಿಸಿ ಚತುರ್ಮುಖ ಬ್ರಹ್ಮನಿಗೆ ವೇದವನ್ನು ತಂದಿತ್ತನು.

''ಮತ್ಸ್ಯಕೂರ್ಮಾದಿರೂಪಂ ಚ ವಿಷ್ಣೋರ್ಜ್ಞಾನೈಕ ಮಾತ್ರಕಮ್।
ತನ್ಮನ್ಯಂತೇ ಭೌತಿಕಂ ತು ಯೇ ಗಚ್ಛಂತ್ಯಧರಂ ತಮಃ'' ಇತಿ ಬ್ರಾಹ್ಮೇ
(ಭಾಗ. ತಾ.ನಿ. ೩-೩೩-೨೮)

''ಭಗವಂತನ ಮತ್ಸ್ಯ, ಕೂರ್ಮ ಮುಂತಾದ ರೂಪಗಳು ಜ್ಞಾನಾನಂದ ಸ್ವರೂಪಗಳು. ಯಾರು ಅವುಗಳನ್ನು ಭೌತಿಕ ರೂಪಗಳೆಂದು ತಿಳಿವರೋ ಅವರು ಅಂಧಂತಮಸ್ಸಿಗೆ ಹೋಗುವರು.''

ಆದ್ದರಿಂದಲೇ ಆಚಾರ್ಯರು ಇಲ್ಲಿ ಮತ್ಸ್ಯರೂಪ ಎನ್ನದೆ ಮತ್ಸ್ಯ'ಕ'ರೂಪ, ಕೂರ್ಮಸ್ವರೂಪ'ಕ', ಸೂಕರರೂಪ'ಕ' ಎಂದು ''ಕ'' ಎಂಬ ಅಕ್ಷರವನ್ನು ಸೇರಿಸಿದ್ದಾರೆ. 'ಕ' ಎಂದರೆ ಸುಖರೂಪ ಎಂದರ್ಥ.

**ಕೂರ್ಮಸ್ವರೂಪಕ ಮಂದರಧಾರಿನ್**
**ಲೋಕವಿಧಾರಕ ದೇವವರೇಣ್ಯ ॥ ೫ ॥**

ಅಮೃತ ಮಥನಕಾಲದಲ್ಲಿ ಪಾಲಕಡಲಿನಲ್ಲಿ ಮುಳುಗಿದ ಮಂದರವ ಪೊತ್ತವನೇ! ಬ್ರಹ್ಮಾಂಡದ ಒಳ ಹೊರಗೆ ಎರಡು ರೂಪಗಳಿಂದ ಎಲ್ಲಾ ಲೋಕಗಳನ್ನು ವಿಶಿಷ್ಟವಾಗಿ ಧಾರಣೆ ಮಾಡಿರುವವನೇ ! ದೇವೋತ್ತಮನೆ ! ಆನಂದಮಯನಾದ ಕೂರ್ಮರೂಪನೇ ! ನಿನಗೆ ವಂದನೆಯು.

**ವಿವರಣೆ:** ದೂರ್ವಾಸರು, ತಾವು ನೀಡಿದ ಐಶ್ವರ್ಯಪ್ರದವಾದ ಮಾಲೆಯನ್ನು ಐಶ್ವರ್ಯದ ಮದದಿಂದ ದೇವೇಂದ್ರ ನೆಲಕ್ಕೆ ಹಾಕಲು, 'ಐಶ್ವರ್ಯ ಭ್ರಷ್ಟನಾಗು' ಎಂದು ಶಪಿಸಿದರು. ಬ್ರಾಹ್ಮಣರ ಶಾಪದ ಪ್ರಭಾವದಿಂದ

ದುರ್ಬಲರಾದ ದೇವತೆಗಳು ದೈತ್ಯರಿಂದ ಪರಾಜಿತರಾದರು. ಭಗವಂತನು ತನ್ನಲ್ಲಿ ಶರಣಾದ ದೇವತೆಗಳಿಗೆ, ಬಲಿಚಕ್ರವರ್ತಿಯೊಂದಿಗೆ ಸಂಧಾನ ಮಾಡಿಕೊಂಡು ಸಮುದ್ರಮಥನ ಮಾಡಿ ಅಮೃತವನ್ನು ಪಡೆಯುವಂತೆ ಆದೇಶಿಸಿದನು.

ಮಥನ ಮಾಡಲು ಮಂದರ ಪರ್ವತವನ್ನು ಕಿತ್ತಲೆಣಿಸಿ ಸುರರು ಅಸಮರ್ಥರಾದರು. ಆಗ ಶ್ರೀಹರಿಯೇ ಎಡಗೈಯಿಂದ ಮಂದರವನ್ನು ಕಿತ್ತು ಅನಂತನಾಮಕಗರುಡನ ಮೇಲೆ ಇರಿಸಿಕೊಂಡು ಪಾಲ್ಗಡಲ ಪಾರ್ಶ್ವಕ್ಕೆ ಬಂದನು. ದಾರಿಯಲ್ಲಿ ಸುರಾಸುರರು ತಾವು ಸ್ವಲ್ಪ ಪರ್ವತವನ್ನು ಹೊರುವ ಆಸೆ ತೋರಿಸಿದರು. ಭಗವಂತನು ಸುಮ್ಮನಿದ್ದ. ಗರುಡನ ಹೆಗಲಿನಿಂದ ಪರ್ವತವನ್ನು ಇಳಿಸಲು ಹೋಗಿ ಮೈ ಮೇಲೆ ಹಾಕಿಕೊಂಡು ಘಾಸಿಗೊಂಡರು. ಭಗವಂತನ ಕೃಪಾಕಟಾಕ್ಷದಿಂದ ಅವರೆಲ್ಲ ಮತ್ತೆ ಮೊದಲಿನಂತೆ ಎದ್ದು ನಿಂತರು.' ಪುನಃ ಎಡಗೈಯಿಂದ ಪರ್ವತವನ್ನು ಲೀಲೆಯಿಂದಲೆ ಗರುಡನ ಮೇಲಿರಿಸಿಕೊಂಡು ಕ್ಷೀರ ಸಮುದ್ರದಲ್ಲಿ ಸ್ಥಾಪಿಸಿದನು.

ವಾಸುಕಿಯನ್ನು ಮಂದರಕ್ಕೆ ಸುತ್ತಿ ಸುರಾಸುರರು ಮಥನ ಪ್ರಾರಂಭಿಸಿದರು. ಭಾರದಿಂದ ಮಂದರಪರ್ವತ ಮುಳುಗಿ ಪಾತಾಲ ಸೇರಿತು. ಆಗ ಭಗವಂತ ಒಂದು ಲಕ್ಷಯೋಜನ ವಿಸ್ತಾರಬೆನ್ನುಳ್ಳ ಕೂರ್ಮರೂಪದಿಂದ ಇನ್ನೊಬ್ಬರಿಂದ ಧರಿಸಲಾಗದ ಆ ಮಂದರವನ್ನು ಬಹುಲೀಲೆಯಿಂದಲೆ ಮೇಲೆತ್ತಿದನು.

ಪಕ್ವವಾದ ಮಾಪಿನ ಹಣ್ಣನ್ನು ಹಿಸುಕಿದಾಗ ವಾಟೆ (ಬೀಜ) ಮೇಲಕ್ಕೆ ಚಿಮ್ಮು ವಂತೆ ಮಥನದ ಸಂದರ್ಭದಲ್ಲಿ ಪರ್ವತವು ಮೇಲೆ ಹಾರದಂತೆ ಮೇಲೊಂದು ರೂಪದಿಂದಲೂ ಹಾಗೆ ಮಥನದಿಂದ ಪರ್ವತವು ಪುಡಿಯಾಗದಂತೆ ಅದರೊಳಗೆ ಒಂದು ರೂಪದಿಂದ, ವಾಸುಕಿ ತುಂಡಾಗದಿರಲೆಂದು ಅದರಲ್ಲೂ ಒಂದು ರೂಪದಿಂದ, ಸುರಾಸುರರೊಳಗೆ ಬಲಪ್ರದನಾಗಿ ಒಂದು ರೂಪ ದಿಂದಲೂ ಭಗವಂತನು ಸನ್ನಿಹಿತನಾಗಿ ಅನುಗ್ರಹಿಸಿದನು. ಅಜಿತನಾಗಿ ತಾನೆ ಮಥನ ಮಾಡಿ, ಧನ್ವಂತರಿಯಾಗಿ ಅಮೃತ ತಂದು, ಮೋಹಿನಿಯಾಗಿ ದೇವತೆ ಗಳಿಗೆ ಅದನ್ನು ಕರುಣಿಸಿದನು.

ಕೂರ್ಮರೂಪಿಯಾದ ವಾಯುದೇವರನ್ನು ಹೊತ್ತುಕೊಂಡು ವಿಷ್ಣುವು ಕೂರ್ಮ ರೂಪದಿಂದ ಬ್ರಹ್ಮಾಂಡದಿಂದ ಹೊರಗೆ ಹಾಗೂ ಒಳಗೂ ಈ ಎಲ್ಲಾ ಲೋಕಗಳನ್ನು ಹೊತ್ತಿರುವನು.

ಧನ್ವಂತರಿಯಾಗಿ ಹಾಗೂ ಮೋಹಿನಿಯಾಗಿ ಎಲ್ಲಾ ದೇವತೆಗಳಿಗೆ ಅಮೃತ ವನ್ನಿತ್ತು, ಅಸುರರಿಗೆ ಅದು ದೊರೆಯದಂತೆಯೂ ಮಾಡಿ ತಾನು 'ದೇವವರೇಣ್ಯ-ದೇವೋತ್ತಮ' ಎಂಬುದನ್ನು ತೋರಿರುವನು.

**ಸೂಕರರೂಪಕ ದಾನವಶತ್ರೋ ಭೂಮಿವಿಧಾರಕ ಯಜ್ಞವರಾಂಗ ॥ ೬ ॥**

ಹಿರಣಾಕ್ಷನನ್ನು ನಿಗ್ರಹಿಸಿದವನೇ ! ಭೂಮಿಯನ್ನು ತನ್ನ ಕೋರೆ ದಾಡೆಯ ತುದಿಯಲ್ಲಿ ವಿಶೇಷವಾಗಿ ಧಾರಣೆ ಮಾಡಿದವನೇ ! ಯಜ್ಞಸಾಧನ ಸಾಮಗ್ರಿಗಳನ್ನು ತನ್ನ ಅವಯವಗಳಿಂದ ಸೃಜಿಸಿದವನೇ ! ಜ್ಞಾನಾನಂದಾತ್ಮಕ ವರಾಹರೂಪನೇ ! ನಿನಗೆ ವಂದನೆಯು.

**ವಿವರಣೆ:** ಸೃಷ್ಟಿಗೆ ತೊಡಗಿದ ಬ್ರಹ್ಮದೇವರು ಭೂಮಿ ಪ್ರಲಯಜಲದಲ್ಲಿ ಮುಳುಗಿದುದನ್ನು ಕಂಡು ಶ್ರೀಹರಿಯಲ್ಲಿ ಪ್ರಾರ್ಥನೆ ಮಾಡಿದರು. ವಿರಿಂಚಿಯ ಮೂಗಿನ ವಿವರದಿಂದ ಅಂಗುಷ್ಠ ಪ್ರಮಾಣದ ವರಾಹರೂಪ ಪ್ರಕಟವಾಯಿತು. ಬಳಿಕ ಆ ರೂಪವೇ ಬೃಹತ್ತಾಯಿತು. ದೇವತೆಗಳೆಲ್ಲಆ ವರಾಹರೂಪವನ್ನು ಸ್ತೋತ್ರ ಮಾಡಿದರು. ಯಜ್ಞಸಾಧನ ಸಾಮಗ್ರಿಗಳೆಲ್ಲ ಭಗವಂತನ ಅಂಗಾಂಗಗಳಿಂದ ಉತ್ಪನ್ನವಾದುದರಿಂದ ಯಜ್ಞವರಾಹನೆಂದು ಪ್ರಸಿದ್ಧನಾದನು. ಅನಂತರ ನೀರಲ್ಲಿ ಮುಳುಗಿ ಭೂಮಿಯನ್ನು ತಾನೆ ಕೋರೆದಾಡೆಯಲ್ಲಿ ಹೊತ್ತು ಮೇಲಕ್ಕೆ ಬಂದನು. ಬ್ರಹ್ಮಪುತ್ರನಾದ ಹಿರಣ್ಯಾಕ್ಷನು ಅಡ್ಡಿ ಪಡಿಸಲು ಬಂದಾಗ ತನ್ನ ದಾಡೆಯಿಂದ ಅವನನ್ನು ಕೊಂದನು.

ಸನಕಾದಿಗಳಿಂದ ಶಾಪಗ್ರಸ್ತನಾದ ವಿಜಯ ಕಶ್ಯಪನ ಮಗನಾಗಿ ಹಿರಣ್ಯಾಕ್ಷನೆಂದೇ ಅದೇ ಅಸುರನ ಜೊತೆಯಲ್ಲಿ ಹುಟ್ಟಿದ. ಆಗ ಹಿರಣ್ಯಾಕ್ಷನೆ ಭೂಮಿಯನ್ನು ಮುಳುಗಿಸಿದ. ಶ್ರೀಹರಿ ಮತ್ತೆ ವರಾಹರೂಪದಿಂದಲೆ ಕಿವಿಯ ಬದಿಯಲ್ಲಿ ಹೊಡೆದು ಆ ಹಿರಣ್ಯಾಕ್ಷನನ್ನೂ ಸಂಹರಿಸಿದನು.

ರೂಪಕ ಶಬ್ದಕ್ಕೆ ವಾಚಸ್ಪತಿ ಕೋಶದಲ್ಲಿ 'ಗುಂಜಾತ್ರಯ ಪರಿಮಾಣ' ಎಂಬರ್ಥವನ್ನು ಹೇಳಲಾಗಿದೆ. ಅದರಂತೆ ಸೂಕರ ರೂಪಕ ಎಂಬ ಪದದ ಮೂಲಕ ಅವತಾರ ಕಾಲದಲ್ಲಿ ಅಲ್ಪ ಪ್ರಮಾಣದ ಸೂಕರನಾಗಿ ಭಗವಂತ ಅವತರಿಸಿದ ಕಥೆಯನ್ನು ಸೂಚಿಸಿಲಾಗಿದೆ. (ಸಿ.ಎಂ.ಪ.)

''ಸೂಕರರೂಪ, ಕದಾನವಶತ್ರೋ'' ಎಂದೂ ಪದವಿಭಾಗ ಮಾಡಬಹುದಾಗಿದೆ. ''ಕ-ಬ್ರಹ್ಮದೇವರಿಂದ ಹುಟ್ಟಿದ, ದಾನವ-ಆದಿ

ಹಿರಣ್ಯಾಕ್ಷನೆಂಬ ಅಸುರನಿಗೆ, ಶತ್ರು- ಸಂಹಾರಕ'' ಎಂದೂ ಅರ್ಥೈಸಬಹುದು. (ಸಿ.ಎಂ.ಪ.)

ಯಜ್ಞವರಾಂಗ-

ತಸ್ಯಾಂಗಸಂಧಿತೋ ಯಜ್ಞಾಃ ಜಾತಾಸ್ತೇ ವೈ ಪೃಥಕ್ ಪೃಥಕ್।
ಭ್ರೂನಾಸಾಸಂಧಿನಾ ಜಾತೋ ಜ್ಯೋತಿಷ್ಟೋಮೋ ಮಹಾಧ್ವರಃ।
ಹನುಶ್ರವಣ ಸಂಧ್ಯೋಸ್ತು ವಹ್ನಿಷ್ಟೋಮೋ ವ್ಯಜಾಯತ।
ಚಕ್ಷುರ್ಭ್ರುವೋಃ ಸಂಧಿನಾ ತು ವ್ರಾತ್ಯಸ್ತೋಮೋ ವ್ಯಜಾಯತ।
ಏವಂ ಯಾವಂತಿ ಯಜ್ಞಾನಿ ಭಾಂಡಾನಿ ಚ ಹವೀಂಷಿ ಚ।
ತಾನಿ ಯಜ್ಞವರಾಹಸ್ಯ ಶರೀರಾದೇವ ಚಾಭವನ್॥
ಏವಂ ಯಜ್ಞವರಾಹಸ್ಯ ಶರೀರಂ ಯಜ್ಞತಾಮಗಾತ್।
ಯಜ್ಞರೂಪೇಣ ಸಕಲಮಾಪ್ಯಾಯಿತಮಿದಂ ಜಗತ್॥

ಮೇಲಿನ ಪುರಾಣ ವಾಕ್ಯದಲ್ಲಿ ವರಾಹನ ಅಂಗಸಂಧಿಗಳಿಂದ ನಾನಾ ಬಗೆಯಾದ ಯಜ್ಞಗಳು ಹುಟ್ಟಿದವು - ಹುಬ್ಬು-ಮೂಗುಗಳ ಸಂಧಿಸ್ಥಲದಿಂದ 'ಜ್ಯೋತಿಷ್ಟೋಮ' ಯಾಗವು, ದವಡೆ-ಕಿವಿಗಳ ಸಂಧಿಸ್ಥಲದಿಂದ 'ಅಗ್ನಿಷ್ಟೋಮ' ಯಾಗವು, ಕಣ್ಣು-ಹುಬ್ಬುಗಳ ಸಂಧಿಯಿಂದ 'ವ್ರಾತ್ಯಸ್ತೋಮ' ಯಾಗವು ಹುಟ್ಟಿದವು. ಹೀಗೆ ಯಜ್ಞಗಳು, ಅವುಗಳ ಪಾತ್ರಾದಿಗಳು, ಹವಿಸ್ಸುಗಳು ವರಾಹ ದೇವರ ಅಂಗಾಂಗಗಳಿಂದ ಹುಟ್ಟಿದವು. ಆದ್ದರಿಂದ ಯಜ್ಞವರಾಹನೆಂದು ಶ್ರೀಹರಿಯು ಪ್ರಸಿದ್ಧನಾಗಿರುವನು ಎಂದು ಹೇಳಲಾಗಿದೆ.

**ದೇವ ನೃಸಿಂಹ ಹಿರಣ್ಯಕಶತ್ರೋ**
**ಸರ್ವಭಯಾಂತಕ ದೈವತಬಂಧೋ ॥ ೭ ॥**

ಜಗತ್ಸೃಷ್ಟ್ಯಾದಿ ಕ್ರೀಡೆ ನಡೆಸುವವನೇ ! ಹಿರಣ್ಯಕಶಿಪುವಿನ ಮಾರಕನೇ ! ಎಲ್ಲರ ಎಲ್ಲಾ ಬಗೆಯ ಭಯವ ಪರಿಹರಿಪನೇ ! ದೇವತೆಗಳ ಬಂಧುವೇ ! ನೃಸಿಂಹನೇ ! ನಿನಗೆ ವಂದನೆಯು.

**ವಾಮನ ವಾಮನ ಮಾಣವವೇಷ**
**ದೈತ್ಯವರಾಂತಕ ಕಾರಣರೂಪ ॥ ೮ ॥**

ಸುಂದರನೇ ! ಬ್ರಹ್ಮಚಾರಿಯ ವೇಷ ತೊಟ್ಟವನೇ ! ದೈತ್ಯ ಶ್ರೇಷ್ಠನಾದ

ಬಲಿಚಕ್ರವರ್ತಿಯನ್ನು ನಿಗ್ರಹಿಸಿದವನೇ ! ದೇವಕಾರ್ಯದ ಸಲುವಾಗಿ ನಾನಾ ರೂಪವನ್ನು ಧರಿಸುವವನೇ ! ವಾಮನನೇ ! ನಿನಗೆ ವಂದನೆಯು.

**ವಿವರಣೆ:** ವಾಮ್ಯೈಃ - ಮನೋಹರ್ಯೈಃ ಜ್ಞಾನಭಕ್ತ್ಯಾದಿಭಿಃ
ನೀಯತೇ - ವಶೀಕ್ರಿಯತೇ ಇತಿ ವಾಮನಃ ತತ್ಸಂಬುದ್ಧಿಃ। (ವಿ.ಪ.ಟೀ.)
ವಾಮ-ಮನೋಹರವಾದ ಜ್ಞಾನಭಕ್ತ್ಯಾದಿಗಳಿಂದ ನ - ವಶೀಕೃತನಾಗುವನು.

**ರಾಮ ಭೃಗೂದ್ವಹ ಸೂರ್ಜಿತದೀಪ್ತೇ**
**ಕ್ಷತ್ರಕುಲಾಂತಕ ಶಂಭುವರೇಣ್ಯ ॥೯॥**

ಭೃಗುವಂಶೋದ್ಧಾರಕನೇ ! ದಿವ್ಯತೇಜೋಮಯನೇ ! ದುಷ್ಟ ಕ್ಷತ್ರಿಯ ಕುಲವ ತರಿದ ವೀರನೇ ! ಬ್ರಹ್ಮರುದ್ರಾದಿವಂದ್ಯನೇ ! ಪರಶುರಾಮನೇ ! ನಿನಗೆ ವಂದನೆಯು.

**ವಿವರಣೆ:** ದುಷ್ಟರ ಸಂಹಾರಕ್ಕಾಗಿಯೇ ಅವತರಿಸಿದ ಪರಶುರಾಮದೇವರು ಕಾರ್ತವೀರ್ಯಾರ್ಜುನನ ಮಕ್ಕಳು ಮಾಡಿದ ತನ್ನ ತಂದೆಯ ಸಂಹಾರಕ್ಕೆ ಪ್ರತೀಕಾರದ ನೆಪದಿಂದ ಇಪ್ಪತ್ತೊಂದು ಬಾರಿ ಸಂಚರಿಸಿ ಎಲ್ಲಾ ದುಷ್ಟರನ್ನು ಸದೆದು ಸ್ಯಮಂತಪಂಚಕದಲ್ಲಿ ಒಂಭತ್ತು ರಕ್ತದ ಸರೋವರಗಳನ್ನು ನಿರ್ಮಿಸಿದರು. ತರುವಾಯ ತನ್ನ ತಂದೆಯಾದ ಜಮದಗ್ನಿಗಳ ರುಂಡ ಮುಂಡಗಳನ್ನು ಜೋಡಿಸಿ ಯಾಗವನ್ನು ಮಾಡಿದರು. ಆ ಪರಶುರಾಮದೇವರ ಪ್ರಸಾದದಿಂದ ಜಮದಗ್ನಿಗಳು ಜ್ಞಾನರೂಪವಾದ ದೇಹವನ್ನು ಪಡೆದು ಸಪ್ತರ್ಷಿಮಂಡಲದಲ್ಲಿ ಏಳನೇ ಋಷಿಗಳಾಗಿ ಉದ್ಧಾರಗೊಂಡರು.

**ರಾಘವ ರಾಘವ ರಾಕ್ಷಸಶತ್ರೋ**
**ಮಾರುತಿ ವಲ್ಲಭ ಜಾನಕಿಕಾಂತ ॥೧೦॥**

ರಘುಕುಲದಿ ಅವತರಿಸಿದ ರಾಘವನೇ ! ರಾವಣಾದಿ ರಾಕ್ಷಸರ ಸಂಹಾರಕನೇ! ಮಾರುತಿ ಪ್ರಿಯನೇ ! ಜಾನಕೀ ರಮಣನೇ ! ಶ್ರೀರಾಮನೇ ! ನಿನಗೆ ವಂದನೆಯು.

**ದೇವಕಿನಂದನ ಸುಂದರರೂಪ**
**ರುಗ್ಮಿಣಿವಲ್ಲಭ ಪಾಂಡವಬಂಧೋ ॥೧೧॥**

ದೇವಕಿಯ ಕಂದನೇ ! ಮನೋಹರರೂಪನೇ ! ರುಗ್ಮಿಣಿಯ ನಲ್ಲನೇ ! ಪಾಂಡವರ ಹಿತಬಾಂಧವನೇ ! ಶ್ರೀಕೃಷ್ಣನೇ ! ನಿನಗೆ ವಂದನೆಯು.

ದೈತ್ಯ ವಿಮೋಹಕ ನಿತ್ಯಸುಖಾದೇ
ದೇವಸುಬೋಧಕ ಬುದ್ಧಸ್ವರೂಪ ॥ ೧೨ ॥

ವೈದಿಕ ಮಾರ್ಗದಲ್ಲಿ ನಡೆಯುತ್ತಿದ್ದ ಅವೈದಿಕ ದೈತ್ಯರನ್ನು ಮೋಹಗೊಳಿಸಿದವನೇ ! ನಿತ್ಯಸುಖರೂಪವಾದ ಮೋಕ್ಷಕ್ಕೆ ಕಾರಣನೇ ! ದೇವತೆಗಳಿಗೆ ತತ್ವಜ್ಞಾನಪ್ರದನೇ ! ಬುದ್ಧರೂಪನೇ ! ನಿನಗೆ ವಂದನೆಯು.

**ವಿವರಣೆ:** ಪಾಂಡವರ ಕ್ಷೇಮಕರಾಜನವರೆಗಿನ ವಂಶದ ಆಡಳಿತ ಮುಗಿಯಿತು. ವೇದವ್ಯಾಸರೂ ತನ್ನ ಶಿಷ್ಯರಾದ ಮುನಿಗಳೊಂದಿಗೆ ಅದೃಶ್ಯರಾಗಿದ್ದರು. ಆದರೂ ಸತ್ಸಂಪ್ರದಾಯ ಆಚರಣೆಯಲ್ಲಿತ್ತು. ದುರಾಗಮಗಳು ಹಾಗೂ ಅದರ ಸಂಪ್ರದಾಯಗಳು ಕಣ್ಮರೆಯಾಗಿದ್ದವು. ಸದಾಗಮಗಳೇ ಪ್ರಚಾರದಲ್ಲಿದ್ದವು. ಆ ಕಾಲದಲ್ಲಿ ರುದ್ರದೇವರಿಂದ ಹಿಂದೆ ಹತರಾಗಿದ್ದ ತ್ರಿಪುರಾಸುರರು ಭೂಮಿಯಲ್ಲಿ ಹುಟ್ಟಿ ಸದಾಗಮಗಳ ಅಧ್ಯಯನದಲ್ಲಿ ತೊಡಗಿದ್ದರು. ದೇವತೆಗಳಿಗೆ ಯೋಗ್ಯವಾದ ಹವಿಸ್ಸನ್ನು ನಾಯಿ ಮುಟ್ಟಿ ಅಪವಿತ್ರಗೊಳಿಸಿದಂತೆ ಸದಾಗಮಗಳ ಸ್ಥಿತಿ ಆಗಿತ್ತು. ತತ್ವಜ್ಞಾನವನ್ನು ಪಡೆಯಲು ಅಯೋಗ್ಯರಾದ ತಮೋಯೋಗ್ಯರಾದ ಅಸುರರು ವೈದಿಕ ಮಾರ್ಗಾವಲಂಬಿಗಳಾಗಿರುವುದನ್ನು ಕಂಡ ಬ್ರಹ್ಮಾದಿ ದೇವತೆಗಳು ಕ್ಷೀರ ಸಮುದ್ರದಲ್ಲಿ ಪವಡಿಸಿರುವ ಶ್ರೀಮನ್ನಾರಾಯಣನಲ್ಲಿ ವಿಜ್ಞಾಪಿಸಿದರು. ಅವರಿಗೆ ಅಭಯವಿತ್ತನು ಶ್ರೀಹರಿ.

ಆ ಕ್ಷಣದಿಂದಲೇ ಸುಂದರಶಿಶುರೂಪವನ್ನು ಭಗವಂತನು ಧರಿಸಿದನು. ತ್ರಿಪುರಾಸುರರಲ್ಲಿ ಮೊದಲಿಗನಾದ ಶುದ್ಧೋದನ ಹಾಗೂ ಜಿನನೆಂದು ಪ್ರಸಿದ್ಧನಾದ ಅಸುರನಿಗೆ ಗಯಾಕ್ಷೇತ್ರದಲ್ಲಿ ಆಗ ತಾನೆ ಶಿಶುವು ಹುಟ್ಟಿತ್ತು. ಶ್ರೀವಿಷ್ಣುವು ಆ ಶಿಶುವನ್ನು ದೂರಕ್ಕೆಸೆದು ತಾನೇ ಶಿಶುರೂಪದಿಂದ ಆ ಸ್ಥಲದಲ್ಲಿದ್ದನು. ಅಸುರರಿಗೆ ತಮ್ಮ ಮಗುವು ಕಣ್ಮರೆಯಾದದ್ದು ತಿಳಿಯಲಿಲ್ಲ. ಶ್ರೀಹರಿಯ ಶಿಶುರೂಪವನ್ನು ಕಂಡು ಅದನ್ನೆ ತಮ್ಮ ಮಗುವೆಂದು ಭಾವಿಸಿದರು.

ಮಗು ಆ ಅಸುರರ ವೈದಿಕ ಕರ್ಮಾನುಷ್ಠಾನವನ್ನು ನೋಡಿ ನಸುನಕ್ಕಿತು. ಆಗ ತಾನೆ ಹುಟ್ಟಿದ ಶಿಶು ನಗುವುದನ್ನು ಕಂಡು ಚಕಿತರಾದ ಅವರೆಲ್ಲ 'ನೀನಾರು?'

ಎಂದು ಕೇಳಿದರು. ನಿತ್ಯಜ್ಞಾನ ಸ್ವರೂಪನಾದ ವಿಷ್ಣು 'ನಾನು ಬುದ್ಧ' ಎಂದು ಹೇಳಿಕೊಂಡನು. ಬೌದ್ಧದರ್ಶನವನ್ನು ಅವರಿಗೆ ಉಪದೇಶಿಸಿದನು. ಆದರೂ ಅಸುರರಿಗೆ ವಿಶ್ವಾಸ ಹುಟ್ಟಲಿಲ್ಲ. ಆಗ ಭಗವಂತನು ಎಲ್ಲಾ ದೇವತೆಗಳನ್ನು ನೆನೆದನು. ಶ್ರೀಹರಿಯ ಆಜ್ಞೆಯನ್ನು ಅರಿತ ಸುರರು ತಮ್ಮ ಆಯುಧಗಳನ್ನು ಮಗುವಿನ ಮೇಲೆ ಎಸೆದರು. ಎಲ್ಲವನ್ನು ಮಗು ನುಂಗಿ ಹಾಕಿತು. ದೈತ್ಯರಿಗೆ ಅತಿಮೋಹವನ್ನು ಉಂಟು ಮಾಡಬೇಕೆಂದು ತನ್ನ ಮೂಲ ರೂಪದಿಂದಲೆ ಬಿಟ್ಟ ಚಕ್ರವನ್ನು ಕೂಡಲೇ ಹಿಡಿದು ಅದನ್ನೆ ಆಸನವನ್ನಾಗಿಸಿ ಅದರಲ್ಲಿ ಕೂತನು. ಎಲ್ಲಾ ದೇವತೆಗಳೂ ಅವನನ್ನು ನಮಿಸಿ ತಮ್ಮ ಲೋಕಗಳಿಗೆ ಹಿಂತಿರುಗಿದರು. ಜಿನಾದಿ ದೈತ್ಯರು ಬುದ್ಧನ ಉಪದೇಶವನ್ನು ಸ್ವೀಕರಿಸಿದರು. ಶ್ರೀಹರಿಯಿಂದ ವಿಮೋಹಿತರಾದ ಅಸುರರು ಜ್ಞಾನಧರ್ಮಗಳನ್ನು ಪರಿತ್ಯಜಿಸಿ ಅಂಧಂತಮಸ್ಸಿಗೆ ಹೋದರು.

ಬುದ್ಧನ ಉಪದೇಶ ಈ ತೆರನಾಗಿತ್ತು - ೧. ಎಲ್ಲವೂ ಕ್ಷಣಿಕ, ೨. ಎಲ್ಲವೂ ಜ್ಞಾನರೂಪ, ೩. ಎಲ್ಲವೂ ಅಸತ್, ೪. ಎಲ್ಲವೂ ಶೂನ್ಯ, ೫. ಎಲ್ಲವೂ ಅಭಾವ.

ಬುದ್ಧನ ಈ ಉಪದೇಶದಿಂದ ಜಿನಾದಿ ದೈತ್ಯರು ಮೋಹಗೊಂಡ ಮೇಲೆ ದೇವತೆಗಳಿಗೆ ತನ್ನ ಉಪದೇಶದ ಅಂತರಾರ್ಥವನ್ನು ಅರುಹಿದನು.

೧. ಕಾಲಪ್ರವಾಹ ನಿತ್ಯವಾದರೂ ಕ್ಷಣ, ಲವ, ಕಾಷ್ಠಾದಿ ಕಾಲವಿಶೇಷಗಳೆಲ್ಲ ನಿತ್ಯವಲ್ಲ-ಸ್ವಭಾವತಃ ನಾಶವಾಗುವಂತಹವು. ಕ್ಷಣಗಳು ಕ್ಷಣ ಮಾತ್ರ ಇರುವಂತಹವು. ಘಟಾದಿ ಪದಾರ್ಥಗಳೂ ಅನಿತ್ಯವಾದವುಗಳಾದುದರಿಂದ ಅಲ್ಪಕಾಲವರ್ತಿಗಳು ಎಂದೇ 'ಎಲ್ಲವೂ ಕ್ಷಣಿಕ' ಎಂಬ ತನ್ನ ಅಭಿಪ್ರಾಯ.

೨. ಪರಮಜ್ಞಾನರೂಪನಾದ ಪ್ರಯುಕ್ತ 'ಜ್ಞ' ಎನಿಸಿರುವ ನನ್ನಿಂದ, ಅಸ್ವ-ತಂತ್ರವಾದ ಈ ಪ್ರಪಂಚವು 'ಅನ' ಪ್ರೇರಿಸಲ್ಪಡುವಂತಹುದು. ಆದುದರಿಂದ ಎಲ್ಲವೂ ಜ್ಞಾನರೂಪ.

೩. ದೋಷವರ್ಜಿತನು, ಜಗತ್ತಿನಿಂದ ಅತ್ಯಂತ ಭಿನ್ನನು, ಗುಣಪೂರ್ಣನೂ ಆದುದರಿಂದ 'ಅ'ಕಾರ ವಾಚ್ಯನಾದ ನನ್ನಿಂದ (ಶ್ರೀಹರಿಯಿಂದ) ''ಸತ್'' ನಾಶಹೊಂದಲ್ಪಡುವುದರಿಂದ 'ಅಸತ್' ಎನಿಸಿದೆ ಈ ಜಗತ್ತು.

೪. 'ಶು' ಸುಖಸ್ವರೂಪ, 'ಉ' ಸರ್ವೋತ್ತಮನು ಆದ ಶ್ರೀಹರಿಯಿಂದ

ನಿಯಂತ್ರಿಸಲ್ಪಡಲು ಯೋಗ್ಯವಾದುದು (ನಿಯಮ್ಯ). ಆದುದರಿಂದ ಎಲ್ಲವೂ ಶೂನ್ಯ. ಶು + ಉ = ಶೂ, ನಿ + ಯ = ನ್ಯ - ಶೂನ್ಯ.

೫. 'ಅ'ಕಾರ ವಾಚ್ಯನಾದ ಶ್ರೀಹರಿಯಿಂದ - ''ಭಾವ'', ಉತ್ಪನ್ನವಾಗುವುದರಿಂದ 'ಅಭಾವ'.

ಈ ಬುದ್ಧನ ಉಪದೇಶವು 'ಪ್ರಶಾಂತವಿದ್ಯೆ' ಎನಿಸಿದೆ. ಇದು ಮೋಕ್ಷ ಸಾಧನವು. ಹೀಗೆ ಭಗವಂತನ ಮಾತು ಎಲ್ಲೂ ಎಂದೂ ಹೇಯವಾಗುವುದಿಲ್ಲ.

ಭಗವಂತನ ಉಪದೇಶವನ್ನು ತಪ್ಪಾಗಿ ಗ್ರಹಿಸಿದ ಜಿನನೂ ಮತಾಂತರವನ್ನು ಸ್ಥಾಪಿಸಿದನು. ಅಸುರರಿಗೆಲ್ಲ ಈ ಬೌದ್ಧ, ಜೈನ ಮತಗಳೆರಡರಲ್ಲಿ ಅತ್ಯಾದರ ಹುಟ್ಟಿತು.

ದೇವತೆಗಳು ಪ್ರಶಾಂತವಿದ್ಯೆಯಿಂದ ಸಂತೋಷಗೊಂಡು ಭಗವಂತನನ್ನು ಸೇವಿಸಿದರು. ಭಾರತಾದಿ ಸದಾಗಮ ಹಾಗೂ ತದನುಸಾರಿಯಾದ ಸತ್ಸಂಪ್ರದಾಯವನ್ನು ಮನುಷ್ಯೋತ್ತಮರು ಅನುಸರಿಸಿ ಉದ್ಧಾರಗೊಂಡರು. (ಮ. ಭಾ. ತಾ. ನಿ.-೩೨-೧೪೨, ೧೬೨)

ಹೀಗೆ ಶ್ರೀವಿಷ್ಣುವು ಬುದ್ಧರೂಪದಿಂದ ದೈತ್ಯವಿಮೋಹಕನು, ದೇವಸುಬೋಧಕನೂ ಆಗಿ ಮುಕ್ತಿಯೋಗ್ಯರ ಮುಕ್ತಿಸುಖಕ್ಕೆ ಕಾರಣನಾಗಿ ನಿತ್ಯಸುಖಾದಿಯೂ ಆದನು.

**ದುಷ್ಟಕುಲಾಂತಕ ಕಲ್ಕಿಸ್ವರೂಪ**
**ಧರ್ಮವಿವರ್ಧನ ಮೂಲಯುಗಾದೇ ॥ ೧೩ ॥**

ಕಲಿಯುಗದ ಕೊನೆಯಲ್ಲಿ ಮ್ಲೇಚ್ಛರಾಗಿ ಹುಟ್ಟಿದ ದುಷ್ಟ ದೈತ್ಯರ ವಿನಾಶಕನೇ! ಧರ್ಮದ ಅಭಿವೃದ್ಧಿಯನ್ನುಂಟು ಮಾಡಿದವನೇ ! ಕೃತಯುಗ ಪ್ರವರ್ತಕನೇ! ಕಲ್ಕಿ ಸ್ವರೂಪನೇ! ನಿನಗೆ ವಂದನೆಯು.

**ವಿವರಣೆ:** ಭೂಮಿಯಲ್ಲಿ ಸಜ್ಜನರು ಯಥಾರ್ಥಜ್ಞಾನಿಗಳಾಗಿ ಸನ್ಮಾರ್ಗದಲ್ಲಿರುವುದನ್ನು ಸಹಿಸದ ಕ್ರೋಧವಶಾದಿ ದೈತ್ಯರು ಶಿವನನ್ನು ಕುರಿತು ತಪಸ್ಸು ಮಾಡಿ ಜಗತ್ತನ್ನೇ ಮೋಹಗೊಳಿಸುವ ಶಕ್ತಿಯನ್ನು ಸಂಪಾದನೆ ಮಾಡಿದರು. ಭೂಮಿಯಲ್ಲಿ ಹುಟ್ಟಿ ಜೀವೇಶ್ವರ ಅಭೇದವನ್ನು ಪ್ರತಿಪಾದಿಸುತ್ತಾ ತಮ್ಮ

ಕುತರ್ಕಜಾಲದಿಂದ ಸಜ್ಜನರನ್ನೆಲ್ಲ ಮೋಹಗೊಳಿಸಿದರು. ಅವರ ಅಧಃಪಾತ ಹಾಗೂ ಸಜ್ಜನರ ಉದ್ಧಾರಕ್ಕಾಗಿ ಭೀಮಸೇನದೇವರು ಮಧ್ವಾಚಾರ್ಯರಾಗಿ ಅವತರಿಸಿದರು. ಮತ್ತೆ ದುಷ್ಟರ ಹಾವಳಿ ಹೆಚ್ಚಾದಾಗ ದುರ್ಗಾದೇವಿ ಬ್ರಾಹ್ಮಣರ ಮನೆಯಲ್ಲಿ ಅವತರಿಸಿ ಅಸುರ ಸಮೂಹವನ್ನೆ ಅಳಿಸಿ ಹಾಕುವಳು.

ಕಲಿಯುಗದ ಕೊನೆಯಲ್ಲಿ ಧರ್ಮಜ್ಞಾನಾದಿ ಕಲ್ಯಾಣಗುಣಗಳೆಲ್ಲಾ ಪೂರ್ಣಕಣ್ಮರೆಯಾಗುವ ಸ್ಥಿತಿ ತಲುಪಿದಾಗ ಬ್ರಹ್ಮಾದಿ ದೇವತೆಗಳು ಮತ್ತೆ ಕ್ಷೀರಸಮುದ್ರಕ್ಕೆ ಹೋಗಿ ನಾರಾಯಣನಲ್ಲಿ ಪ್ರಾರ್ಥಿಸುವರು. ಭಗವಂತನು ಸಜ್ಜನರ ಉದ್ಧಾರಕ್ಕಾಗಿ 'ಶಮ್ಭಳ' ಎಂಬ ಗ್ರಾಮದಲ್ಲಿ 'ವಿಷ್ಣುಯಶಸ್' ಎಂಬ ಬ್ರಾಹ್ಮಣನ ಮನೆಯಲ್ಲಿ ಕಲ್ಕಿಯಾಗಿ ಅವತರಿಸಿ ಒಂದೇ ದಿನದಲ್ಲಿ, ಅಶ್ವಾರೂಢನಾಗಿ ಅಧರ್ಮಮಾರ್ಗದ ಎಲ್ಲಾ ಜನರನ್ನು ನಿರ್ನಾಮಗೈಯುವನು. ಸಜ್ಜನರಲ್ಲಿ ಧರ್ಮಮರ್ಯಾದೆಯನ್ನು, ಜ್ಞಾನ, ಭಕ್ತಿಗಳನ್ನು ಸಂಸ್ಥಾಪನೆ ಗೈಯ್ಯುವನು. ಕೃತಯುಗದ ಪುನರುತ್ಥಾನಗೈಯುವನು.

''ಕಲಂ - ಜ್ಞಾನಂ, ಕಂ- ಸುಖಂ = ಕಲ್ಕಂ. ತದ್ವಾನ್ ಕಲ್ಕೀ.'' ಜ್ಞಾನಸುಖರೂಪ ನಾದುದರಿಂದ ಕಲ್ಕೀ.

''ಕಲ- ಹಿಂಸಾಯಾಂ,ಕಲ ಬಂಧನೇ'' ಇತಿ ಧಾತೋಶ್ಚ ಕಾಲ್ಕಾರಃ ಬಂಧನಂ। ಕಾಲ್ಕಾರ ಏವ ಕಲ್ಕಂ. ತದ್ವಾನ್ ಕಲ್ಕೀ. ಕಲಿಯನ್ನು ನಿಗ್ರಹಿಸಿದ ಕಾರಣ ಕಲ್ಕೀ. (ಮ.ಭಾ.ತಾ.ನಿ. ೩೨-೧೬೩-, ೧೬೮)

**ನಾರಾಯಣಾಮಲ ಕಾರಣಮೂರ್ತೇ**
**ಪೂರ್ಣಗುಣಾರ್ಣವ ನಿತ್ಯಸುಬೋಧ ॥೧೪॥**

ನಿರ್ದೋಷನೇ! ಜಗತ್ತಿಗೆ ನಿಮಿತ್ತ ಕಾರಣಮೂರ್ತಿಯೇ! ಪೂರ್ಣಗುಣ ಸಾಗರನೇ! ಅಳಿವಿರದ ಜ್ಞಾನ ರೂಪನೇ! ನಾರಾಯಣನೇ! ನಿನಗೆ ವಂದನೆಯು.

**ವಿವರಣೆ:** ಹತ್ತವತಾರದ ಹರಿಯೂ ಮೂಲರೂಪಿ ನಾರಾಯಣನೂ ಅತ್ಯಂತ ಅಭಿನ್ನನೆಂದು ತಿಳಿಸಲು ಕೊನೆಯಲ್ಲಿ ನಾರಾಯಣ ಸುತ್ತಿಯನ್ನು ಮಾಡಿರುವರು.

**ಆನಂದತೀರ್ಥ ಮುನೀಂದ್ರಕೃತಾ**
**ಹರಿಗಾಥಾ ಪಾಪಹರಾ ಶುಭಾ ನಿತ್ಯಸುಖಾರ್ಥಾ ॥೧೫॥**

**॥ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ**
**ದ್ವಾದಶಸ್ತೋತ್ರೇ ಷಷ್ಠೋಽಧ್ಯಾಯಃ ॥**

ಆನಂದತೀರ್ಥರೆಂಬ ಮುನಿಶ್ರೇಷ್ಠರಿಂದ ರಚಿತವಾದ ಶ್ರೀಹರಿಗಾಥಾ ರೂಪವಾದ ಈ ಸ್ತುತಿಯು ಮಂಗಲಮಯವೂ ಪಾಪಪರಿಹಾರಕವೂ ನಿತ್ಯಸುಖವೀವುದೂ ಆಗಿದೆ.

**ವಿವರಣೆ:** ''ಶುಭನಿತ್ಯಸುಖಾರ್ಥಾ'' - (ಹ್ಯ.ಪಾ.)

**॥ ಇತಿ ಷಷ್ಠೋಽಧ್ಯಾಯಃ ॥**

# ಸಪ್ತಮೋಽಧ್ಯಾಯಃ

**ವಿಶ್ವಸ್ಥಿತಿಪ್ರಲಯಸರ್ಗಮಹಾವಿಭೂತಿ**
**ವೃತ್ತಿಪ್ರಕಾಶನಿಯಮಾವೃತಿಬಂಧಮೋಕ್ಷಾಃ।**
**ಯಸ್ಯಾ ಅಪಾಂಗಲವಮಾತ್ರತ ಊರ್ಜಿತಾ ಸಾ**
**ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥೧॥**

ಜಗದ ಇರವು, ಅಳಿವು, ಸೃಷ್ಟಿ, ಐಸಿರಿಯು, ಬಾಳು, ತಿಳಿವು, ನಿಯಮನ, ಅಜ್ಞಾನ, ಬಂಧ, ಮೋಕ್ಷಗಳು ಯಾವ ರಮೆಯ ಕಡೆಗಣ್ಣನೋಟದ ಲೇಶಮಾತ್ರದಿಂದ ನಡೆವವೋ ಅಂಥ ರಮೆಗೆ ಯಾರ ಕುಡಿನೋಟದ ಬಲವೋ ಅಂಥ ಯಾರಿಗೂ ಮಣಿಯದ ಶ್ರೀಹರಿಯನ್ನು ನಮಿಸುವೆನು.

**ವಿವರಣೆ:** ಹೃಷಿಕೇಶತೀರ್ಥೀಯ ಪಾಠದಲ್ಲಿ ಇದು ಮೊದಲನೆ ಸ್ತೋತ್ರವಾಗಿದೆ. ಈ ಸ್ತೋತ್ರವನ್ನು 'ಶ್ರೀಸ್ತುತಿ' ಎಂದು ಹೆಸರಿಸಲಾಗಿದೆ. ಮೊದಲ ಮೂರು ಚರಣಗಳಲ್ಲಿ ಲಕ್ಷ್ಮಿಯ ಮಹಿಮಾವರ್ಣನೆ. ಕೊನೆಯ ಚರಣದಲ್ಲಿ ಲಕ್ಷ್ಮಿಯೂ ಭಗವಂತನ ಅಧೀನಗಳೆಂಬುದರ ವರ್ಣನೆ ಇದರಲ್ಲಿದೆ. ಅಂಭೃಣೀ ಸೂಕ್ತವು ಮೊದಲು ರಮಾಮಹಿಮಾ ವರ್ಣನೆ ಮಾಡಿ "ಮಮ ಯೋನಿ. . ." ಎಂದು ರಮೆಯೂ ಶ್ರೀಹರಿಯ ಅಧೀನ ಎಂಬುದಾಗಿ ವರ್ಣನೆ ಮಾಡಿದೆ. ಶ್ರೀಮಧ್ವರೂ ಇಲ್ಲಿ ಅದನ್ನೇ ಅಳವಡಿಸಿರುವರು.

"ಮಯಾ ಸೋ ಅನ್ನಮತಿ ಯೋ ವಿ ಪಶ್ಯತಿ
ಯಃ ಪ್ರಾಣಿತಿ ಯ ಈಂ ಶೃಣೋತ್ಯುಕ್ತಮ್।
ಅಮಂತವೋ ಮಾಂ ತ ಉಪಕ್ಷಿಯಂತಿ
ಶ್ರುಧಿಶ್ರುತ ಶ್ರದ್ಧಿವಂ ತೇ ವದಾಮಿ" (ಅಂಭೃಣೀಸೂಕ್ತ - ಗೀ.ಭಾ.)

ಉಣ್ಣುವವನು ನನ್ನ ಪ್ರೇರಣೆಯಿಂದಲೆ ಉಣ್ಣುವನು. ತಿಳಿಯುವವನು ನನ್ನಿಂದಾಗಿಯೇ ತಿಳಿಯುವನು, ಜೀವಿಸುವವನು ನನ್ನಿಂದಾಗಿಯೇ ಜೀವಿಸುವನು. ಕೇಳುವವನು ನನ್ನಿಂದಾಗಿಯೇ ಕೇಳುವನು. ಯಾರು ನಿರಪರಾಧಿಗಳೋ ಅವರು ನನ್ನ ಬಳಿಯಲ್ಲೇ ವಾಸಿಸುವರು. ಪ್ರಸಿದ್ಧವಾದ ಭಕ್ತನೆ! ಶ್ರದ್ಧಾರ್ಹವಾದ ವಿಷಯವನ್ನು ನಿನಗೆ ಹೇಳುತ್ತೇನೆ ಕೇಳು.

'ಯಂ ಕಾಮಯೇ ತನ್ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ
ತಮೃಷಿಂ ತಂ ಸುಮೇಧಾಂ' (ಅಂಭೃಣೀ ಸೂಕ್ತ)

ನಾನು ಯಾರನ್ನು ರುದ್ರ, ಬ್ರಹ್ಮಾ, ಋಷಿ, ಪ್ರಜ್ಞಾವಂತರನ್ನಾಗಿ ಮಾಡಬಯಸುವನೋ ಅವರನ್ನು ಆ ಆಸ್ಥಾನದಲ್ಲಿರಿಸಬಲ್ಲೆ.

''ಮಮ ಯೋನಿರಪ್ಸ್ವಂತಃ ಸಮುದ್ರೇ'' (ಅಂಭೃಣೀಸೂಕ್ತ)

ಅಂಥ ನನಗೂ ಕಾರಣಪುರುಷ ಸಮುದ್ರಶಾಯಿಯಾದ ಶ್ರೀನಾರಾಯಣ ಎಂದು ಲಕ್ಷ್ಮೀದೇವಿಯು ನುಡಿಯುವಳೆಂದು ಅಂಭೃಣೀಸೂಕ್ತದಲ್ಲಿ ತಿಳಿಸಲಾಗಿದೆ.

ಸ್ವಸ್ಯಾಃ ಸ್ತ್ರಿಯಸ್ತ್ರಿಜಗತೋ ಜನಕೋ ಜನನ್ಯಾ
ವಕ್ಷೋನಿವಾಸಮಕರೋತ್ ಪರಮಂ ವಿಭೂತೇಃ।
ಶ್ರೀಃ ಸ್ವಾಃ ಪ್ರಜಾಃ ಸಕರುಣೇನ ನಿರೀಕ್ಷಣೇನ
ಯತ್ರ ಸ್ಥಿತೈಧಯತ ಸಾಧಿಪತೀಂಸ್ತ್ರಿಲೋಕಾನ್॥

(ಭಾಗ-೮-೮-೨೪)

ಅಮೃತಕ್ಕಾಗಿ ನಡೆಸಿದ ಸಮುದ್ರಮಥನದ ಸಂದರ್ಭದಲ್ಲಿ ಆವಿರ್ಭಾವಗೊಂಡ ಲಕ್ಷ್ಮೀದೇವಿ ಶ್ರೀಹರಿಯ ವಕ್ಷಸ್ಥಲದಲ್ಲಿ ನೆಲೆಸಿ ಕರುಣೆ ತುಂಬಿದ ಕುಡಿನೋಟ ಮಾತ್ರದಿಂದ ಎಲ್ಲಾ ದೇವತೆಗಳನ್ನು ಅವರು ಸಮೃದ್ಧರಾಗುವಂತೆ ಅನುಗ್ರಹಿಸಿದಳು.

ಬ್ರಹ್ಮೇಶಶಕ್ರರವಿಧರ್ಮಶಶಾಂಕಪೂರ್ವ
ಗೀರ್ವಾಣಸಂತತಿರಿಯಂ ಯದಪಾಂಗಲೇಶಮ್।
ಆಶ್ರಿತ್ಯ ವಿಶ್ವವಿಜಯಂ ವಿಸೃಜತ್ಯಚಿಂತ್ಯಾ
ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥ ೨ ॥

ಬ್ರಹ್ಮ, ರುದ್ರ, ದೇವೇಂದ್ರ, ಸೂರ್ಯ, ಯಮಧರ್ಮ, ಚಂದ್ರ ಮುಂತಾದ ದೇವತಾಗಣವು ಯಾರ ಕಡೆಗಣ್ಣನೋಟಲೇಶವನ್ನು ಆಶ್ರಯಿಸಿ ಜಗದ ಗೆಲುವು ಪಡೆವುದೋ ಅಂಥ ತಿಳುವಿಗೆಟಕದ ರಮೆಗೆ ಯಾರ ಕಟಾಕ್ಷದ ಬಲವೋ ಅಂಥ ಅಜಿತನಿಗೆ ನಮನ.

ವಿವರಣೆ: 'ವಿಶ್ವವಿಜಯಂ ವಿದಧಾತ್ಯಚಿಂತ್ಯಾ' - ಎಂದು ಹೃತೀ. ಪಾಠ.

**ಧರ್ಮಾರ್ಥಕಾಮಸುಮತಿಪ್ರಚಯಾದ್ಯಶೇಷ**
**ಸನ್ಮಂಗಲಂ ವಿದಧತೇ ಯದಪಾಂಗಲೇಶಮ್।**
**ಆಶ್ರಿತ್ಯ ತತ್ಪ್ರಣತ ಸತ್ಪ್ರಣತಾ ಅಪೀಡ್ಯಾಃ**
**ಶ್ರೀಯರ್ಮತ್ಕಟಾಕ್ಷಬಲವತ್ಯಜಿತಂ ನಮಾಮಿ ॥ ೩ ॥**

ಸ್ತುತ್ಯರಾದ ಬ್ರಹ್ಮಾದಿ ದೇವತೆಗಳು, ಧರ್ಮಾರ್ಥಾದಿಗಳನ್ನು ಬಯಸಿದ ಸಜ್ಜನರು ತಮ್ಮನ್ನು ನಮಿಸಿದರೂ ಲಕ್ಷ್ಮೀದೇವಿಯ ಅಪಾಂಗಲೇಶವನ್ನು ಆಶ್ರಯಿಸಿಯೇ ಅವರಿಗೆ ಧರ್ಮ, ಅರ್ಥ, ಕಾಮ, ಸುಮತಿ ಇವುಗಳ ಅಭಿವೃದ್ಧಿಯೇ ಮೊದಲಾದ ಎಲ್ಲ ಮಂಗಲವನ್ನು ನೀಡುವರೋ ಅಂತಹ ರಮೆಗೆ ಕಟಾಕ್ಷದಿಂದ ಬಲವಿತ್ತ ಅಜಿತನಿಗೆ ವಂದನೆಯು.

**ವಿವರಣೆ:** 'ಅಪೀಡ್ಯಾ' ಎಂದು ಹ್ಯ.ತೀ. ಪಾಠ.

**ಷಡ್‌ವರ್ಗ ನಿಗ್ರಹ ನಿರಸ್ತ ಸಮಸ್ತ ದೋಷಾ**
**ಧ್ಯಾಯಂತಿ ವಿಷ್ಣುಮೃಷಯೋ ಯದಪಾಂಗಲೇಶಮ್।**
**ಆಶ್ರಿತ್ಯ ಯಾನಪಿ ಸಮೇತ್ಯ ನ ಯಾತಿ ದುಃಖಂ**
**ಶ್ರೀಯರ್ಮತ್ಕಟಾಕ್ಷಬಲವತ್ಯಜಿತಂ ನಮಾಮಿ ॥ ೪ ॥**

ಯಾರನ್ನು ಆಶ್ರಯಿಸಿದರೆ ದುಃಖದುಮ್ಮಾನಗಳು ದೂರಾಗುವವೋ ಅಂಥ ಅರಿಷಡ್ವರ್ಗಗಳನ್ನು ಗೆದ್ದ, ದೋಷರಹಿತರಾದ ಋಷಿಗಳೂ ಯಾವ ರಮೆಯ ಕರುಣಾಕಟಾಕ್ಷದ ಅನುಗ್ರಹದಿಂದಲೆ ಭಗವಂತನನ್ನು ಬಗೆಯಲ್ಲಿ ಧ್ಯಾನಿಸುವರೋ ಅಂಥ ರಮೆಗೆ ಕೂಡ ಅಪಾಂಗಲವ ಮಾತ್ರದಿಂದ ಬಲವೀಯುವ ಅಜಿತನಿಗೆ ವಂದನೆಯು.

**ವಿವರಣೆ:**

ಅವಿಷ್ಣುಜ್ಞೈರತದ್ಭಕ್ತೈಃ ತದುಪಾಸಾವಿವರ್ಜಿತೈಃ।
ಶಪೇದುಪಾಸಿತಾಽಪ್ಯೇಷಾ ಶ್ರೀಸ್ತಾನ್ ತದ್ಧರಿತತ್ವವಿತ್॥
ತದ್ಭಕ್ತಃ ತಮುಪಾಸ್ಯೈವ ಶ್ರಿಯಂ ಧ್ಯಾಯೀತ ನಿತ್ಯದಾ।
ತೇನ ತುಷ್ಟಾ ತು ಸಾಽಚ್ಛಿದ್ರಂ ದದ್ಯಾತ್ ವಿಷ್ಣೋರುಪಾಸನಮ್।
ತತಸ್ತದ್ದರ್ಶನಾನ್ಮುಕ್ತಿಂ ಯಾತ್ಯಸೌ ನಾತ್ರ ಸಂಶಯಃ।
ತಥಾಪಿ ಸರ್ವಪರಮಾಂ ಸರ್ವದೋಷವಿವರ್ಜಿತಾಮ್॥
ಜ್ಞಾತ್ವಾ ಶ್ರಿಯಂ ತತ್ಪರಮಂ ತತ್ಪತಿಂ ಪುರುಷೋತ್ತಮಮ್।

ವಿಜ್ಞಾಯೋಪಾಸತೇ ನಿತ್ಯಂ ತೇ ಹಿ ಯುಕ್ತತಮಾ ಮತಾಃ||
ಯತಃ ಕ್ಲೇಶೋಽಧಿಕಃ ತೇಷಾಂ ಪೃಥಕ್ ಶ್ರಿಯಮುಪಾಸತಾಮ್।
ವಿಷ್ಣುನಾ ಸಹಿತಾ ಧ್ಯಾತಾ ಸಾ ಹಿ ತುಷ್ಟಿಂ ಪರಾಂ ವ್ರಜೇತ್||
ಅನ್ಯಥಾ ತು ಪುನರ್ವಿಷ್ಣೋಃ ಶ್ರೀಪತಿತ್ವೇನ ಚಿಂತನಮ್।
ಅಚ್ಛಿದ್ರಮೇವ ಕರ್ತವ್ಯಮಿತಿ ಮುಕ್ತಿಶ್ಚಿರಾದ್ ಭವೇತ್।
ತದ್ಮಾದಕ್ಲೇಶತೋ ಮುಕ್ತಿಃ ಕ್ಷಿಪ್ರಂ ವಿಷ್ಣುಮುಪಾಸತಾಮ್||
ಇತಿ ಪರಮಶ್ರುತಿಃ।

(ಗೀ.ತಾ. ೧೨-೨)

ವಿಷ್ಣುವಿನ ಮಹಿಮೆಯನ್ನು ಅರಿಯದವರು, ಅವನಲ್ಲಿ ಭಕ್ತಿ ಮಾಡದಿರುವವರು, ಅವನ ಉಪಾಸನೆ ಮಾಡದಿರುವವರು ಲಕ್ಷ್ಮಿಯನ್ನು ಉಪಾಸನೆ ಮಾಡಿದರೂ ಅವಳು ಶಾಪವನ್ನೇ ಕೊಡುವಳು. ಆದ್ದರಿಂದ ಹರಿಯ ಮಹಿಮೆಯನ್ನು ತಿಳಿದು, ಅವನ ಭಕ್ತಿ, ಉಪಾಸನೆಗಳನ್ನು ಮಾಡುತ್ತಲೇ ಲಕ್ಷ್ಮೀದೇವಿಯನ್ನು ಧ್ಯಾನ ಮಾಡಬೇಕು. ಇದರಿಂದ ಸಂತುಷ್ಟಳಾದ ಲಕ್ಷ್ಮೀದೇವಿಯು ಇಂಥವರಿಗೆ (ಯಥಾಯೋಗ್ಯ) ಸಂಪೂರ್ಣವಾಗಿ ಭಗವಂತನ ಉಪಾಸನೆಯನ್ನು ಒದಗಿಸಿ ಕೊಡುವಳು. ಇದರಿಂದ ಭಗವಂತನ ಅಪರೋಕ್ಷ ಜ್ಞಾನವನ್ನು ಪಡೆದು ಮುಕ್ತಿಯನ್ನು ಪಡೆಯುವನು. ಇದರಲ್ಲಿ ಸಂಶಯವಿಲ್ಲ.

ಲಕ್ಷ್ಮಿಯ ಉಪಾಸನೆಯು ಮೋಕ್ಷಸಾಧನವಾದರೂ ಅದೇ ಉತ್ತಮ ಸಾಧನವಲ್ಲ. ಆದ್ದರಿಂದ ಲಕ್ಷ್ಮೀದೇವಿಯು ಬ್ರಹ್ಮರುದ್ರಾದಿಗಳಿಗೆಲ್ಲರಿಗಿಂತ ಉತ್ತಮಳು, ಸರ್ವದೋಷರಹಿತಳು ಎಂಬುದನ್ನು ತಿಳಿದುಕೊಂಡು ಅವಳ ಪತಿಯಾದ ಪುರುಷೋತ್ತಮನು ಅವಳಿಗಿಂತಲೂ ಶ್ರೇಷ್ಠನು ಎಂಬುದನ್ನು ತಿಳಿದು ಯಾರು ನಿತ್ಯವೂ ಉಪಾಸನೆ ಮಾಡುವರೋ ಅವರು ಅವ್ಯಕ್ತೋಪಾಸಕರಿಗಿಂತ ಅಂದರೆ ಲಕ್ಷ್ಮೀದೇವಿಯ ಉಪಾಸಕರಿಗಿಂತ ಶ್ರೇಷ್ಠರು.

ಲಕ್ಷ್ಮೀದೇವಿಯನ್ನು ಪ್ರತ್ಯೇಕವಾಗಿ ಉಪಾಸನೆ ಮಾಡುವವರಿಗೆ ಕ್ಲೇಶವೇ ಹೆಚ್ಚು. ವಿಷ್ಣುವಿನೊಡನೆಯೇ ಅವಳ ಧ್ಯಾನವನ್ನು ಮಾಡಿದರೆ ಅವಳು ಪರಮ ಸಂತುಷ್ಟಳಾಗುವಳು. ಕೇವಲ ರಮಾದೇವಿಯನ್ನು ಮೊದಲು ಉಪಾಸನೆ ಮಾಡಿದರೆ ಮತ್ತೆ ಲಕ್ಷ್ಮೀಪತಿಯೆಂದು ವಿಷ್ಣುವಿನ ಉಪಾಸನೆಯನ್ನು ಮಾಡಲೇ ಬೇಕಾಗುವುದರಿಂದ ಮೋಕ್ಷವು ವಿಲಂಬವಾಗುವುದು. ಆದ್ದರಿಂದ ಮೊದಲೇ

ವಿಷ್ಣುವನ್ನು ಉಪಾಸನೆ ಮಾಡುವುವರಿಗೆ ಕ್ಲೇಶವಿಲ್ಲದೆ ಮುಕ್ತಿಯಾಗುವುದೆಂದು ಪರಮ ಶ್ರುತಿಯಲ್ಲಿ ಹೇಳಿದೆ.

ಸಾಮವೇದೇ ಮಾಧುಚ್ಛಂದಸಶಾಖಾಯಾಂ ಚೋಕ್ತಃ-

ಭಕ್ತಾಶ್ಚ ಯೇಽತೀವ ವಿಷ್ಣಾವತೀವ ಜಿತೇಂದ್ರಿಯಾಃ ಸಮ್ಯಗಾಚಾರಯುಕ್ತಾಃ।
ಉಪಾಸತೇ ತಾಂ ಸಮಬುದ್ಧಯಶ್ಚ ತೇಷಾಂ ದೇವೀ ದೃಶ್ಯತೇ ನೇತರೇಷಾಂ॥
ದೃಷ್ಟ್ವಾ ಚ ಸಾ ಭಕ್ತಿಮತೀವ ವಿಷ್ಣೌ ದತ್ವೋಪಾಸ್ತೌ ಸರ್ವವಿಘ್ನಾನ್ ಛಿನತ್ತಿ।
ಉಪಾಸ್ಯ ತಂ ವಾಸುದೇವಂ ವಿದಿತ್ವಾ ತತಸ್ತತಃ ಶಾಂತಿಮತ್ಯಂತಮೇತಿ॥
(ಗೀ. ಭಾ. ೧೨-೨)

ಸಾಮವೇದದ ಮಾಧುಚ್ಛಂದ್ರಸ ಶಾಖೆಯಲ್ಲಿ ಕೂಡ ಹೇಳಿದೆ- ವಿಷ್ಣುವಿನಲ್ಲಿ ಹೆಚ್ಚಿನ ಭಕ್ತಿಯುಳ್ಳವರೂ ಸರಿಯಾಗಿ ಇಂದ್ರಿಯನಿಗ್ರಹಿಗಳೂ ಚೆನ್ನಾಗಿ ಆಚಾರತತ್ಪರರೂ ಸರ್ವಪ್ರಾಣಿಗಳಲ್ಲಿ 'ಸಮಭಾವ'ವುಳ್ಳವರೂ ಆಗಿ ತನ್ನನ್ನು ಆರಾಧಿಸುವವರಿಗೆ ಮಾತ್ರ ಲಕ್ಷ್ಮಿಯು ಪ್ರತ್ಯಕ್ಷಳಾಗುವಳು. ಉಳಿದವರಿಗಿಲ್ಲ. ಪ್ರತ್ಯಕ್ಷಳಾದ ಲಕ್ಷ್ಮಿಯು ಹೆಚ್ಚಿನ ವಿಷ್ಣುಭಕ್ತಿಯನ್ನು ಕರುಣಿಸಿ ಅವನ ಆರಾಧನೆಗೆ ಉಂಟಾಗುವ ಎಲ್ಲ ತೊಡಕುಗಳನ್ನು ದೂರಮಾಡುವಳು. ಆಮೇಲೆ ವಾಸುದೇವನನ್ನು ಧ್ಯಾನಿಸಿ, ಸಾಕ್ಷಾತ್ಕರಿಸಿ, ಅವನ ಪ್ರಸಾದದಿಂದ ಚಿರಶಾಂತಿಯನ್ನು ಪಡೆಯುವನು.

**ಶೇಷಾಹಿ ವೈರಿಶಿವಶಕ್ರಮನುಪ್ರಧಾನ**
**ಚಿತ್ರೋರುಕರ್ಮರಚನಂ ಯದಪಾಂಗಲೇಶಮ್।**
**ಆಶ್ರಿತ್ಯ ವಿಶ್ವಮಖಿಲಂ ವಿದಧಾತಿ ಧಾತಾ**
**ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥ ೫ ॥**

ಶೇಷ, ಗರುಡ, ರುದ್ರ, ಇಂದ್ರ, ಮನು ಮೊದಲಾದವರ ನಾನಾ ಬಗೆಯ ಕೃತಿಯುಳ್ಳ ಈ ವಿಶ್ವವನ್ನು ನಾಲ್ಮೊಗಬೊಮ್ಮ ಯಾರ ಕಟಾಕ್ಷದ ಬಲದಿಂದ ಸೃಜಿಸುತಿಹನೋ ಅಂಥ ಲಕ್ಷ್ಮೀದೇವಿಗೂ ಯಾರ ಅಪಾಂಗದ ಬಲವೋ ಅಂಥ ಅಜಿತನಿಗೆ ವಂದನೆಯು.

**ಶಕ್ರೋಗ್ರದೀಧಿತಿಹಿಮಾಕರಸೂರ್ಯಸೂನು**
**ಪೂರ್ವಂ ನಿಹತ್ಯ ನಿಖಿಲಂ ಯದಪಾಂಗಲೇಶಮ್।**

**ಆಶ್ರಿತ್ಯ ನೃತ್ಯತಿ ಶಿವಃ ಪ್ರಕಟೋರು ಶಕ್ತಿಃ**
**ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥ ೬ ॥**

ಶಿವನು ಯಾರ ಕಡೆಗಣ್ಣನೋಟದ ಬಲವನ್ನು ಆಶ್ರಯಿಸಿ ಇಂದ್ರ, ಸೂರ್ಯ, ಚಂದ್ರ, ಯಮ ಮೊದಲಾದ ನಿಖಿಲ ವಿಶ್ವವನ್ನು ಸಂಹರಿಸಿ ತನ್ನ ಮಹಿಮೆಯನ್ನು ಪ್ರಕಟಪಡಿಸುತ್ತ ತಾಂಡವ ನೃತ್ಯವನ್ನು ಗೈಯುವನೋ ಅಂಥ ರಮೆಗೆ ಯಾರ ಕರುಣಾ ಕಟಾಕ್ಷದ ಬಲವೋ ಅಂಥ ಅಜಿತನಿಗೆ ನಮಸ್ಕಾರವು.

**ವಿವರಣೆ:** ಬ್ರಹ್ಮರುದ್ರರು ನಾರಾಯಣ ಸಮಾನರೆಂದು, ಸೃಷ್ಟಿ ಸಂಹಾರಕರ್ತರೆಂದು, ಶಿವನೇ ಸರ್ವೋತ್ತಮನೆಂದು ಹೇಳುವ ಅಜ್ಞಾನಿಗಳ ಮತವನ್ನು ನಿರಾಕರಿಸುವ ಉದ್ದೇಶದಿಂದ ಆಚಾರ್ಯರು ಮೇಲಿಂದ ಮೇಲೆ ಬ್ರಹ್ಮ ರುದ್ರಾದಿ ಸಮಸ್ತ ದೇವತೆಗಳು ವಿಷ್ಣುವಿನ ಅಧೀನರೆಂದು ತಿಳಿಸುವರು. ಬ್ರಹ್ಮದೇವರು ತಮಗಿಂತ ಅವರರಾದ ಶೇಷಾದಿಗಳ ಸೃಷ್ಟಿಕರ್ತರೆಂದು, ರುದ್ರದೇವರು ತಮಗಿಂತ ಅವರರಾದ ಇಂದ್ರಾದಿಗಳ ಸಂಹಾರವನ್ನು ಮಾತ್ರ ಭಗವಂತನ ಅಧೀನಳಾದ ರಮಾದೇವಿಯ ಅನುಗ್ರಹ ಬಲದಿಂದಲೇ ಮಾಡುವರೆಂದು ತಿಳಿಸುವರು.

ಮಹಾದೇವರ ವರದಿಂದ ತಂಡಿ ಎಂಬ ಋಷಿಯ ಪುತ್ರರಿಂದ ಕಲ್ಪಸೂತ್ರರೂಪವಾಗಿ ನೃತ್ಯಶಾಸ್ತ್ರವು ರಚನೆಯಾಗಿದೆ. ಆದುದರಿಂದ ಆ ನೃತ್ಯಕ್ಕೆ ತಾಂಡವನೃತ್ಯ ಎಂದು ಹೆಸರು. ಇದು ನಟರಾಜನೆನಿಸಿದ ಶಿವನಿಗೆ ಅತ್ಯಂತ ಪ್ರಿಯ. (ಸಿ.ಎಂ.ಪ.)

**ತತ್ಪಾದಪಂಕಜಮಹಾಸನತಾಮವಾಪ**
**ಶರ್ವಾದಿವಂದ್ಯಚರಣೋ ಯದಪಾಂಗಲೇಶಮ್।**
**ಆಶ್ರಿತ್ಯ ನಾಗಪತಿರನ್ಯಸುರೈರ್ದುರಾಪಾಂ**
**ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥ ೭ ॥**

ರುದ್ರ, ಇಂದ್ರಾದಿ ದೇವತೆಗಳಿಂದ ಸ್ತುತ್ಯಚರಣನಾದ ಶೇಷನು ಯಾವ ರಮೆಯ ಕಟಾಕ್ಷಲೇಶದ ಬಲದಿಂದ ಇತರರಿಂದ ಹೊಂದಲಾಗದ, ಭಗವಂತನ ಪಾದಕಮಲದ ಆಸನವಾಗುವ ಭಾಗ್ಯವನ್ನು ಪಡೆದಿಹನೋ ಅಂಥ ರಮೆಗೆ ಯಾರ ಅಪಾಂಗದ ಬಲವೊ ಅಂಥ ಅಜಿತನಿಗೆ ನಮನವು.

**ವಿವರಣೆ:** ಗರುಡಶೇಷರುದ್ರರು ಯೋಗ್ಯತೆಯಲ್ಲಿ ಸಮಾನರಾದರೂ

ರುದ್ರನಿಂದ ಶೇಷ ಪದವಿಯು ಸಂಪಾದ್ಯವಾಗಿರುವುದರಿಂದ ಶೇಷನನ್ನು ಶರ್ವವಂದ್ಯ ಎನ್ನಬಹುದು.

**ನಾಗಾರಿರುಗ್ರಬಲಪೌರುಷ ಆಪ ವಿಷ್ಣೋ-**
**ರ್ವಾಹತ್ವಮುತ್ತಮಜವೋ ಯದಪಾಂಗಲೇಶಮ್।**
**ಆಶ್ರಿತ್ಯ ಶಕ್ರಮುಖದೇವಗಣೈರಚಿಂತ್ಯಂ**
**ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥ ೮ ॥**

ಯಾವ ರಮೆಯ ಕಡೆಗಣ್ಣನೋಟದ ಬಲದಿಂದ, ಘೋರವಾದ ದೇಹಬಲ ಮತ್ತು ಪರಾಕ್ರಮವುಳ್ಳ, ಉತ್ತಮ ವೇಗವುಳ್ಳ ಗರುಡನು ಇಂದ್ರಾದಿ ದೇವತೆಗಳ ಯೋಚನೆಗೆ ನಿಲುಕದ ಭಗವಂತನ ವಾಹನವಾಗುವ ಭಾಗ್ಯವನ್ನು ಪಡೆದನೋ ಅಂಥ ರಮೆಗೆ ಯಾವ ಅಜಿತನ ಕೃಪಾಕಟಾಕ್ಷದ ಬಲವೋ ಆ ಅಜಿತನಿಗೆ ವಂದನೆಯು.

**ವಿವರಣೆ:** 'ವಿಷ್ಣುವಾಹತ್ವ' ಹ್ಯ.ತೀ.ಪಾ.

**ಆನಂದತೀರ್ಥಮುನಿಸನ್ಮುಖಪಂಕಜೋತ್ಥಂ**
**ಸಾಕ್ಷಾದ್ರಮಾಹರಿಮನಃಪ್ರಿಯಮುತ್ತಮಾರ್ಥಮ್।**
**ಭಕ್ತ್ಯಾ ಪರತ್ಯಜಿತಮಾತ್ಮನಿ ಸನ್ನಿಧಾಯ**
**ಯಃ ಸ್ತೋತ್ರಮೇತದಭಿಯಾತಿ ತಯೋರಭೀಷ್ಟಮ್ ॥ ೯ ॥**

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ**
**ದ್ವಾದಶಸ್ತೋತ್ರೇ ಸಪ್ತಮೋಽಧ್ಯಾಯಃ ॥**

ಆನಂದ ತೀರ್ಥ ಮುನಿಗಳ ಉತ್ತಮವಾದ ಮುಖಕಮಲದಿಂದ ಉದ್ಭವಿಸಿದ ಮುಖ್ಯವಾಗಿ ರಮಾ-ನಾರಾಯಣರ ಮನಃಪ್ರಿಯವಾದ, ಸರ್ವೋತ್ತಮನಾದ ಶ್ರೀಹರಿಯನ್ನು ಕೊಂಡಾಡುವ ಈ ದಿವ್ಯ ಸ್ತೋತ್ರವನ್ನು ಅಜಿತನನ್ನು ಹೃದಯದಲ್ಲಿ ನೆನೆಯುತ್ತ ಭಕ್ತಿಯಿಂದ ಯಾರು ಪಠಿಸುವರೋ ಅವರು ರಮಾಮಾಧವರ ಅನುಗ್ರಹದಿಂದ ಮನೋರಥವನ್ನು ಹೊಂದುವರು.

**ವಿವರಣೆ:**

ಬ್ರಹ್ಮಾದಯೋ ಯದಪಾಂಗಮೋಕ್ಷ
ಕಾಮಾ ಯಥೋಕ್ತವಿಧಿನಾ ಭಗವತ್ಪ್ರಪನ್ನಾಃ।

ಸಾ ಶ್ರೀಃ ಸ್ವವಾಸಮರವಿಂದವನಂ ವಿಹಾಯ
ಯತ್ಪಾದ ಸೌಭಗಮಲಂ ಭಜತೇ ನು ರಕ್ತಾ॥ (ಭಾಗವತ)

ಬ್ರಹ್ಮಾದಿ ದೇವತೆಗಳು ಯಾರ ಕಡೆಗಣ್ಣನೋಟದ ಅನುಗ್ರಹವನ್ನು ಬಯಸುತ್ತ ಭಗವಂತನಲ್ಲಿ ಶರಣಾಗಿಹರೋ ಅಂಥ ಲಕ್ಷ್ಮಿಯು ತನ್ನ ನೆಲೆಯಾದ ಕಮಲವನವನ್ನೂ ಬಿಟ್ಟು ಶ್ರೀಹರಿಯ ಪಾದಕಮಲದ ಸೌಂದರ್ಯವನ್ನು ಚೆನ್ನಾಗಿ ಆಸ್ವಾದಿಸುತಿಹಳು.

ಋತೇ ಭವತ್ಪಾದಪರಾಯಣಂ
ನ ಮಾಂ ವಿದಂತ್ಯಹಂ ತ್ವದ್ಧೃದಯಾ ಯತೋಽಜಿತ॥ (ಭಾಗವತ)

ಅಜಿತ ! ನಿನ್ನ ಪಾದದಲ್ಲಿ ಮೊರೆಯಿಡದೆ ನನ್ನನ್ನು ಯಾರೂ ಅರಿಯರು. ಎನ್ನ ಮನ ನಿನ್ನಲ್ಲಿ ನೆಲೆಸಿರುವುದಲ್ಲವೆ? ಎಂದು ಭಾಗವತದಲ್ಲಿ ರಮಾದೇವಿಯ ವಚನದ ಪ್ರಸ್ತಾಪವಿದೆ.

॥ ಇತಿ ಸಪ್ತಮೋಽಧ್ಯಾಯಃ ॥

# ಅಷ್ಟಮೋಽಧ್ಯಾಯಃ

**ವಂದಿತಾಶೇಷವಂದ್ಯೋರುವೃಂದಾರಕಂ**
**ಚಂದನಾಚರ್ಚಿತೋದಾರ ಪೀನಾಂಸಕಮ್।**
**ಇಂದಿರಾಚಂಚಲಾಪಾಂಗನೀರಾಜಿತಂ**
**ಮಂದರೋದ್ಧಾರಿವೃತ್ತೋದ್ಭುಜಾಭೋಗಿನಮ್ ॥೧॥**

**ಪ್ರೀಣಯಾಮೋ ವಾಸುದೇವಂ ದೇವತಾಮಂಡಲಾಖಂಡಮಂಡನಮ್॥**
(ನಂದಿತೀರ್ಥೋರುಸನ್ನಾಮಿನೋ ನಂದಿನಃ ಸಂದಧಾನಾಃ ಸದಾನಂದ ದೇವೇ ಮತಿಮ್॥)

ಎಲ್ಲರಿಂದ ವಂದಿತರಾದ ಉತ್ತಮದೇವತೆಗಳಿಗಿಂತಲೂ ವಂದ್ಯನು. ಚಂದನದ ಲೇಪವುಳ್ಳ, ಎತ್ತರವು, ಪುಷ್ಟವು ಆದ ಹೆಗಲುಳ್ಳವನು. ಇಂದಿರೆಯ ಚಂಚಲವಾದ ಕಡೆಗಣ್ಣನೋಟದ ಆರತಿಯ ಸೊಬಗಿನವನು. ಮಂದಜನರ ಉದ್ಧರಿಪ ಹಾಗೂ ಮಂದರ ಪರ್ವತವನ್ನು ಎತ್ತುವ ಸ್ವಭಾವದ ದುಂಡಗಿನ ನೀಳತೋಳಿನವನು. ದೇವತೆಗಳ ಮಂಡಲದ ಪೂರ್ಣ ಅಲಂಕಾರನು. ಇಂತಹ ವಾಸುದೇವನನ್ನು, ಪೂರ್ಣಾನಂದನಲ್ಲಿ ಮತಿಯನ್ನು ನೆಲೆಗೊಳಿಸಿ ಸಂತಸಪಡುವ ಆನಂದತೀರ್ಥರೆಂಬ ಶುಭನಾಮಧೇಯವುಳ್ಳ ನಾವು ಒಲಿಸುವೆವು.

**ವಿವರಣೆ:** ಅಶೇಷವಂದ್ಯ - 'ಶೇಷ' ಎಂದರೆ ಅಪ್ರಧಾನ ಎಂದು ಅರ್ಥ. ರಮಾಬ್ರಹ್ಮಾದಿಗಳೆಲ್ಲ ಭಗವದ್ಭಕ್ತರೆಂದು ಅಪ್ರಧಾನವಾಗಿ ವಂದ್ಯರು. ವಾಸುದೇವನು ಅಶೇಷವಂದ್ಯ, ಮುಖ್ಯವಾಗಿಯೇ ವಂದಿಸಲು ಯೋಗ್ಯನಾದವನು.

ಮಂದರೋದ್ಧಾರಿ = ಮಂದೇಷು ತುಚ್ಛೇಷು ವಿಷಯೇಷು ರಮತೇ ಇತಿ ಮಂದರಃ। ಮಂದರಂ ಸಂಸಾರಾದ್ ಉದ್ಧರ್ತುಂ ಶೀಲಮನಯೋರಸ್ತೀತಿ ಮಂದರೋದ್ಧಾರಿಣೌ॥ ವಿಷಯಾಸಕ್ತ ಸಜ್ಜನರ ಗುಂಪನ್ನು ಉದ್ಧರಿಸುವ ಸ್ವಭಾವದ ಭುಜವುಳ್ಳವನು.

ಮಂದಾನ್ ಅವಿವೇಕಿನಃ ಪಶ್ವಾದೀನ್ ತೃಣಾದಿನಾ ರಮಯತೀತಿ ಮಂದರಃ

ಗೋವರ್ಧನಃ। ತಂ ಉದ್ಧರ್ತುಂ ಶೀಲಮಸ್ಯಾಸ್ತೀತಿ ಮಂದರೋದ್ಧಾರೀ ವೃತ್ತಃ ಯಃ ಉದ್ಭುಜಃ। ತಸ್ಯ ಆಭೋಗಃ ಪ್ರಯತ್ನಃ ಅಸ್ಯಾಸ್ತೀತಿ ತಮ್।

ಅವಿವೇಕಿಗಳಾದ ಪಶು ಮೊದಲಾದವುಗಳನ್ನು ಹುಲ್ಲು, ನೀರುಗಳಿಂದ ಸಂತೋಷಪಡಿಸುವುದರಿಂದ ಮಂದರವೆನಿಸಿದ ಗೋವರ್ಧನ ಪರ್ವತವನ್ನು ಎತ್ತುವ ಸ್ವಭಾವದ ಉತ್ತಮ ಭುಜಗಳ ಪ್ರಯತ್ನವುಳ್ಳವನು.

ಹನ್ನೆರಡನೇ ಶ್ಲೋಕದ ಪೂರ್ವಾರ್ಧ-''ನಂದಿತೀರ್ಥೋರು ಸನ್ನಾಮಿನಃ . . . '' ಎಂಬ ಸಾಲನ್ನು ಪ್ರತಿಶ್ಲೋಕದಲ್ಲೂ ಅನ್ವಯ ಮಾಡಿಕೊಂಡು ಅರ್ಥೈಸಬೇಕು. 'ಮಂಡಾನಮ್' ಎಂದು ಹ್ಯ.ತೀ. ಪಾಠ. ಆ ಪಾಠದಲ್ಲಿ ಇದು ಆರನೆ ಸ್ತೋತ್ರ.

**ಸೃಷ್ಟಿ ಸಂಹಾರಲೀಲಾ ವಿಲಾಸಾತತಂ**
**ಪುಷ್ಟಷಾಡ್ಗುಣ್ಯ ಸದ್ವಿಗ್ರಹೋಲ್ಲಾಸಿನಮ್।**
**ದುಷ್ಟನಿಶ್ಶೇಷ ಸಂಹಾರಕರ್ಮೋದ್ಯತಂ**
**ಹೃಷ್ಟ ಪುಷ್ಟಾನುಶಿಷ್ಟ ಪ್ರಜಾಸಂಶ್ರಯಮ್॥**

**ಪ್ರೀಣಯಾಮೋ ವಾಸುದೇವಂ**
**ದೇವತಾಮಂಡಲಾಖಂಡಮಂಡನಮ್ ॥ ೨ ॥**

ಸೃಷ್ಟಿ ಸಂಹಾರಗಳು ಇವನ ಲೀಲಾವಿಲಾಸ. ಪೂರ್ಣಗಳಾದ ಐಶ್ವರ್ಯ, ವೀರ್ಯ, ಯಶಸ್ಸು, ಸಂಪತ್ತು, ಜ್ಞಾನ, ವಿಜ್ಞಾನಗಳೆಂಬ ಆರುಗುಣಗಳ ಗಡಣವೆ ಮೈತಾಳಿದ ಉಲ್ಲಾಸ. ದುಷ್ಟಜನರ ನಿಶ್ಶೇಶನಾಶವೆ ಉದ್ಯೋಗ. ಸಂತುಷ್ಟರಾದ ಜ್ಞಾನಭಕ್ತ್ಯಾದಿಗಳಿಂದ ತುಂಬಿದ ಶಿಷ್ಟ ಜನರಿಗೆ ನೆಮ್ಮದಿಯ ನೆಲೆ. ಇಂಥ ವಾಸುದೇವನನ್ನು ಸಂತೋಷಗೊಳಿಸುವೆವು.

**ವಿವರಣೆ-** 'ಪುಷ್ಟಾತಿಶಿಷ್ಟ' ಎಂದು ಹ್ಯ.ತೀ. ಪಾಠ.

ನಿಮಿತ್ತಮಾತ್ರಮೀಶಸ್ಯ ವಿಶ್ವಸರ್ಗನಿರೋಧಯೋಃ।
ಹಿರಣ್ಯಗರ್ಭಶ್ಶರ್ವಶ್ಚ ಕಾಲಾಖ್ಯಾ ರೂಪಿಣಸ್ತವ॥ (ಭಾಗವತ)

ಭಗವಂತನೆ ವಿಶ್ವದ ಸೃಷ್ಟಿ, ಲಯಗಳನ್ನು ಮಾಡುವವನು. ಕಾಲರೂಪಿಯಾದ ಶ್ರೀಹರಿಯು ನಡೆಸುವ ಸೃಷ್ಟಿ, ಲಯಗಳಲ್ಲಿ ಬ್ರಹ್ಮ ಶಿವರು ನಿಮಿತ್ರ ಮಾತ್ರ.

''ಸ ಬ್ರಹ್ಮಣಾ ವಿಸೃಜತೆ, ಸ ರುದ್ರೇಣ ವಿಲಾಪಯತಿ
ಸೋಽನುತ್ಪತ್ತಿಲಯ ಏಕ ಏವ ಹರಿಃ ಪರಃ ಪರಾನಂದಃ''
(ಮಹೋಪನಿಷತ್)

ಅವನು ಬ್ರಹ್ಮನಲ್ಲಿದ್ದು ಅವನಿಂದ ಸೃಷ್ಟಿ ಮಾಡಿಸುವನು. ರುದ್ರನಲ್ಲಿದ್ದು ಅವನಿಂದ ಸಂಹಾರ ಮಾಡಿಸುವನು. ಅವನು ಹುಟ್ಟು ಸಾವಿರದವನು. ಪೂರ್ಣಾನಂದನಾದ ಹರಿಯೊಬ್ಬನೆ ಸರ್ವೋತ್ತಮ.

ಸೃಷ್ಟ್ಯಾದಿಕಂ ಹರಿರ್ನೈವ ಪ್ರಯೋಜನಮಪೇಕ್ಷ್ಯತು।

ಯಥಾ ಲೋಕೇ ಮತ್ತಸ್ಯ ಸುಖೋದ್ರೇಕಾದೇವ ನೃತ್ತಗಾನಾದಿಲೀಲಾ, ನ ಪ್ರಯೋಜನಾಪೇಕ್ಷಯಾ। ಏವಮೇವೇಶ್ವರಸ್ಯ। ನಾರಾಯಣ ಸಂಹಿತಾಯಾಂ ಚ-

ಕುರುತೇ ಕೇವಲಾನಂದಾದ್ ಯಥಾ ಮತ್ತಸ್ಯ ನರ್ತನಮ್।
ಪೂರ್ಣಾನಂದಸ್ಯ ತಸ್ಯೇಹ ಪ್ರಯೋಜನಮತಿಃ ಕುತಃ।
ಮುಕ್ತಾ ಅಸ್ಯಾಪ್ತಕಾಮಾಃ ಸ್ಯುಃ ಕಿಮು ತಸ್ಯಾಖಿಲಾತ್ಮನಃ।
(ಬ್ರ.ಸೂ.ಭಾ. ೨-೧-೩೪)
ದೇವಸ್ಯೈಷ ಸ್ವಭಾವೋಽಯಮಾಪ್ತಕಾಮಸ್ಯ ಕಾ ಸ್ಪೃಹಾ॥
(ಮಾಂಡೂಕೋಪನಿಷತ್)

ಲೋಕದಲ್ಲಿ ಉನ್ಮತ್ತನಾದವನು ಪ್ರಯೋಜನದ ಬಯಕೆಯಿಲ್ಲದೆ ಆನಂದೋದ್ರೇಕದಿಂದಲೆ ನೃತ್ಯಗಾನಾದಿ ಲೀಲೆಗಳನ್ನು ನಡೆಸುವಂತೆ ಶ್ರೀಹರಿಯೂ ಪ್ರಯೋಜನವನ್ನು ಬಯಸದೆ ಆನಂದೋದ್ರೇಕದಿಂದಲೆ ಸೃಷ್ಟ್ಯಾದಿಗಳನ್ನು ನಡೆಸುವನು. ಪೂರ್ಣಾನಂದನಿಗೆ ಪ್ರಯೋಜನದ ಮತಿ ಏಕೆ? ಮುಕ್ತರೇ ಆಪ್ತಕಾಮರಾಗಿರುವಾಗ ಮುಕ್ತರೊಡೆಯನಾದ ಸರ್ವಸ್ವಾಮಿಯು ಆಪ್ತಕಾಮನಾಗಿರದಿಹನೇ?

ಇಚ್ಛಾರೂಪನಾದ ಕ್ರೀಡಾದಿಗುಣವಿಶಿಷ್ಟನಾದ ಶ್ರೀಹರಿಗೆ ತನಗೆ ಪ್ರಯೋಜನವಿರದಿದ್ದರೂ ಮತ್ತೊಬ್ಬರ ಹಿತಕ್ಕಾಗಿ ಜಗತ್ಸೃಷ್ಟಿ ಮಾಡುವುದು ಸ್ವಾಭಾವಿಕ ಕ್ರಿಯೆ. ಪೂರ್ಣಕಾಮನಿಗೆ ಏತರ ಬಯಕೆ? ಈ ಅಭಿಪ್ರಾಯದಿಂದಲೆ ಆಚಾರ್ಯರು 'ಸೃಷ್ಟಿಸಂಹಾರ ಲೀಲಾ ವಿಲಾಸಾತತಮ್' ಎಂದು ಹೇಳಿರುವರು.

**ಉನ್ನತ ಪ್ರಾರ್ಥಿತಾಶೇಷ ಸಂಸಾಧಕಂ**
**ಸನ್ನತಾಲೌಕಿಕಾನಂದದಶ್ರೀಪದಮ್।**

**ಭಿನ್ನಕರ್ಮಾಶಯ ಪ್ರಾಣ ಸಂಪ್ರೇರಕಂ**
**ತನ್ನ ಕಿಂ ನೇತಿ ವಿದ್ವತ್ಸು ಮೀಮಾಂಸಿತಮ್ ॥ ೩ ॥**
**ಪ್ರೀಣಯಾಮೋ . . . ।**

ಧ್ರುವ ಮುಂತಾದ ಹಿರಿಯ ಭಕ್ತರ ಬಯಕೆಗಳ ಪೂರೈಸುವವನು. ಭಕ್ತಿಯಿಂದ ಬಾಗಿದವರಿಗೆ ಅಲೌಕಿಕವಾದ ಆನಂದ ನೀಡುವ ಶ್ರೀಚರಣವುಳ್ಳವನು. ಬಗೆಬಗೆಯ ಕರ್ಮ, ಬುದ್ಧಿಗಳ, ಪ್ರಾಣಗಳ ಪ್ರೇರಕನು. ವೇದಾರ್ಥ ವಿಚಾರ ಕುಶಲರು 'ಆ ಹರಿಯು ಇಲ್ಲವೇನು? ಇದ್ದೇ ಇರುವನು. ಇಲ್ಲವೆನ್ನುವುದು ತಪ್ಪು' ಎಂದು ಪ್ರತಿಪಾದಿಸುತ್ತಿಹರು. ಇಂಥ ವಾಸುದೇವನನ್ನು ಒಲಿಸುವೆವು.

**ವಿವರಣೆ:** ಸನ್ನತಾಲೌಕಿಕಾನಂದದ - ಭಕ್ತರಿಗೆ ಅಲೌಕಿಕ ಆನಂದ ನೀಡುವವನು. ಲಕ್ಷ್ಮಿಯನ್ನು ತನ್ನ ಪದದಲ್ಲಿ ಭೃತ್ಯಳನ್ನಾಗಿ ಹೊಂದಿದವನು. ಶ್ರೀಪದಂ - ಭಕ್ತರಿಗೆ ಆನಂದ ನೀಡುವ ಶ್ರೀ ರಮೆಗೆ, ಪದಂ - ರಕ್ಷಣೆ ನೀಡುವವನು. (ಪದಂ-ಸ್ಥಾನತ್ರಾಣಯೋಃ-ವಿಶ್ವಕೋಶ).

**ವಿಪ್ರಮುಖ್ಯೈಃ ಸದಾ ವೇದವಾದೋನ್ಮುಖೈಃ**
**ಸುಪ್ರತಾಪೈಃ ಕ್ಷಿತೀಶೇಶ್ವರೈಶ್ಚಾರ್ಚಿತಮ್।**
**ಅಪ್ರತರ್ಕ್ಯೋರು ಸಂವಿದ್ಗುಣಂ ನಿರ್ಮಲಂ**
**ಸಪ್ರಕಾಶಾಜರಾನಂದರೂಪಂ ಪರಮ್ ॥ ೪ ॥**

**ಪ್ರೀಣಯಾಮೋ . . . ।**

ಯಾವಾಗಲೂ ವೇದಾರ್ಥವಿಮರ್ಶೆಯಲ್ಲಿ ಮಗ್ನರಾಗುವ ವಸಿಷ್ಠಾದಿ ಮಹರ್ಷಿಗಳಿಂದ ಹಾಗೂ ಪ್ರತಾಪಶಾಲಿಗಳಾದ ಪ್ರಿಯವ್ರತ ಮುಂತಾದ ಚಕ್ರವರ್ತಿಗಳಿಂದಲೂ ಅರ್ಚಿತನು. ನಮ್ಮ ಯೋಚನೆಗೂ ನಿಲುಕದ ಅರಿವಿನಾಗರ. ನಿರ್ದೋಷನು. ಬೆಳಕಿನ ಪುಂಜ. ಮುಪ್ಪಿನ ವಿಕಾರವಿಲ್ಲದ ಸಂತಸದ ರೂಪ. ಸರ್ವೋತ್ತಮ. ಇಂಥ ವಾಸುದೇವನನ್ನು ಸಂತೋಷಗೊಳಿಸುವೆವು.

**ವಿವರಣೆ:** 'ಸತ್‌ಪ್ರಕಾಶ' - ಎಂದು ಹ್ಯ.ಪಾ. ಚಾರ್ಚಿತಮ್ - ಅಧಿಕವಾಗಿ ಅರ್ಚಿತನು. 'ಚ' ಶಬ್ದಕ್ಕೆ ಆಧಿಕ್ಯ ಎಂದು ಅರ್ಥ. 'ಸಮುಚ್ಚಯೇ ತಥಾಧಿಕ್ಯೇ ನ್ಯೂನತ್ವೇ ಚ ಪ್ರಯುಜ್ಯತೇ ಚ ಶಬ್ದಃ, ಗೀತಾ ತಾತ್ಪರ್ಯ.

**ಅತ್ಯಯೋ ಯಸ್ಯ ಕೇನಾಪಿ ನ ಕ್ವಾಪಿ ಹಿ**
**ಪ್ರತ್ಯಯೋ ಯದ್ಗುಣೇಷೂತ್ತಮಾನಾಂ ಪರಃ।**
**ಸತ್ಯಸಂಕಲ್ಪ ಏಕೋ ವರೇಣ್ಯೋ ವಶೀ**
**ಮತ್ಯನೂನೈಸ್ಸದಾ ವೇದವಾದೋದಿತಃ ॥೫॥**

**ಪ್ರೀಣಯಾಮೋ . . . ।**

ಎಲ್ಲು ಯಾರು ಎಂದು ಇವನ ಮೀರರು. ಸುಜನರೆಲ್ಲ ಇವನ ಗುಣವ ನಂಬಿ ನಡೆವರು. ಎಲ್ಲವನ್ನು ತನ್ನ ವಶದಿ ಇರಿಸಿಕೊಂಡ ಸ್ವಾಮಿಯು. ಇವನ ಬಯಕೆ ಆಗದೆಂದು ಮಿಥ್ಯೆಯು. ಸಮರು ಇಲ್ಲ, ಅಧಿಕರಿಲ್ಲ, ಇವನೆ ಸರ್ವೋತ್ತಮನು. ಬಲ್ಲ ಮಂದಿ ವೇದದಿಂದ ಎಂದೂ ಇವನ ಹಾಡುತಿಹರು. ಇಂಥ ವಾಸುದೇವ ನನ್ನು ನಾವು ಪ್ರೀತಿಗೊಳಿಸುವೆವು.

**ವಿವರಣೆ:** ತದ್ಧಾವತಃ ಅನ್ಯಾನ್ ಅತ್ಯೇತಿ (ಈಶೋಪನಿಷತ್) ಅಚಿಂತ್ಯ ಶಕ್ತಿತಶ್ಚೈವ ಸರ್ವಗತ್ವಾಚ್ಚ ತತ್ ಪರಮ್। ದ್ರವತೋಽತ್ಯೇತಿ ಸಂತಿಷ್ಠತ್ - (ಈಶಭಾಷ್ಯ) ಅಚಿಂತ್ಯ ಶಕ್ತಿಯಿಂದಲೆ ಹಾಗೂ ಎಲ್ಲೆಡೆ ಇರುವುದರಿಂದಲೂ ಇದ್ದಲ್ಲಿಯೇ ಇದ್ದುಕೊಂಡು ಎಲ್ಲವನ್ನು ಗೆಲ್ಲುವನು.

ತಂ ದೇವಾಸ್ಸರ್ವೇ ಅರ್ಪಿತಾಸ್ತದು ನಾತ್ಯೇತಿ ಕಶ್ಚನ। ಏತದ್ವೈತತ್।
ತಸ್ಮಿನ್ ಲೋಕಾಃ ಶ್ರಿತಾಸ್ಸರ್ವೇ ತದು ನಾತ್ಯೇತಿ ಕಶ್ಚನ॥ (ಕಾಠಕ)

ಎಲ್ಲ ದೇವತೆಗಳೂ ಅವನ ಅಧಿನ. ಅವನನ್ನು ಯಾರೂ ಮೀರಲಾರರು. ಎಲ್ಲ ಲೋಕಗಳೂ ಅವನಧೀನ. ಅವನನ್ನು ಯಾರೂ ಮೀರಲಾರರು.

'ಅತ್ಯಯೋ ಯಸ್ಯ ಕೇನಾಽಪಿ' । ಕೇನಾಽಪಿ - ವಾಯುದೇವರಿಂದಲೂ ಅತ್ಯಯಃ - ಶುಭಕರ್ಮ, ಯಸ್ಯ - ಯಾರ ಪ್ರೀತಿಗೋಸ್ಕರ ಮಾಡಲ್ಪಡುತ್ತದೆಯೋ. 'ತಸ್ಮಿನ್ನಪೋ ಮಾತರಿಶ್ವಾ ದಧಾತಿ (ಈಶೋಪನಿಷತ್) ''ತಸ್ಮಿನ್ ಕರ್ಮಾಣ್ಯಧಾನ್ಮರುತ್। ಮಾರುತ್ಯೇವ ಯತಃ ಚೇಷ್ಟಾ ಸರ್ವಾ ತಾಂ ಹರಯೇಽ- ರ್ಪಯೇತ್'' ಎಲ್ಲರ ಎಲ್ಲ ವ್ಯಾಪಾರವೂ ವಾಯುದೇವರ ಪ್ರೇರಣೆ ಯಿಂದಲೇ. ಆದ್ದರಿಂದಲೆ ಎಲ್ಲರ ಎಲ್ಲ ಕ್ರಿಯೆಯನ್ನೂ ವಾಯುದೇವರು ಭಗವಂತನಿಗೆ ಅರ್ಪಿಸುವರು.

**ಪಶ್ಯತಾಂ ದುಃಖಸಂತಾನನಿರ್ಮೂಲನಂ**
**ದೃಶ್ಯತಾಂ ದೃಶ್ಯತಾಮಿತ್ಯಜೇಶಾರ್ಚಿತಮ್।**

**ನಶ್ಯತಾಂ ದೂರಗಂ ಸರ್ವದಾಪ್ಯಾತ್ಮಗಂ**
**ವಶ್ಯತಾಂ ಸ್ವೇಚ್ಛಯಾ ಸಜ್ಜನೇಷ್ವಾಗತಮ್ ॥ ೬ ॥**
**ಪ್ರೀಣಯಾಮೋ . . . ।**

**ವಿವರಣೆ:** 'ಸರ್ವದಾಪ್ಯಾತ್ಮಕಮ್' ಎಂದು ಹ.ತೀ.ಪಾಠ.

ಹೃದಯದಲ್ಲಿ ತನ್ನ ಕಂಡ ಜನರ ದುಃಖ ತರಿವನು. ಕಾಣು ಕಾಣು ಎಂದು ಬ್ರಹ್ಮ, ಶರ್ವರಿಂದ ವಂದ್ಯನು. ನಶಿಸುವಂಥ ಅಸುರಜನಕೆ ಇವನು ಸದಾ ದೂರನು. ಸುಜನಗಣಕೆ ಒಲಿದು ಬಂದು ಹೇಳಿದಂತೆ ನಲಿವನು. (ದೇವಗಡಣಭೂಷಣ, ಮಾಡುವೆವನ ತೋಷಣ.)

**ಅಗ್ರಜಂ ಯಃ ಸಸರ್ಜಾಜಮಗ್ರ್ಯಾಕೃತಿಂ**
**ವಿಗ್ರಹೋ ಯಸ್ಯ ಸರ್ವೇ ಗುಣಾ ಏವ ಹಿ।**
**ಉಗ್ರ ಆದ್ಯೋಽಪಿ ಯಸ್ಯಾತ್ಮಜಾಗ್ರ್ಯಾತ್ಮಜಃ**
**ಸದ್ಗೃಹೀತಃ ಸದಾ ಯಃ ಪರಂ ದೈವತಮ್ ॥ ೭ ॥**
**ಪ್ರೀಣಯಾಮೋ . . . ।**

ಮೊಟ್ಟಮೊದಲು ಹುಟ್ಟಿದಂಥ ಬ್ರಹ್ಮನಿವನ ಕಂದನು. ಎಲ್ಲಾ ಸುಗುಣಗಣವೆ ಇವನ ದೇಹ ರೂಪ ಪೊಂದಿವೆ. ಇಂದ್ರಗಿಂತ ಮೊದಲ ದೇವ ರುದ್ರ ಇವನ ಮೊಮ್ಮಗ. ಸುಜನರೆಲ್ಲ ಭಜಿಪರಿವನ ಇವನೆ ಪಿರಿಯ ದೈವವು. (ಒಲಿಸುವೆವು ಒಲಿಸುವೆವು ಇಂಥ ವಾಸುದೇವನ.)

**ಅಚ್ಯುತೋ ಯೋ ಗುಣೈರ್ನಿತ್ಯಮೇವಾಖಿಲೈಃ**
**ಪ್ರಚ್ಯುತೋಽಶೇಷದೋಷೈಃ ಸದಾ ಪೂರ್ತಿತಃ।**
**ಉಚ್ಯತೇ ಸರ್ವವೇದೋರುವಾದೈರಜಃ**
**ಸ್ವರ್ಚಿತೋ ಬ್ರಹ್ಮರುದ್ರೇಂದ್ರಪೂರ್ವೈಃ ಸದಾ ॥ ೮ ॥**

**ಪ್ರೀಣಯಾಮೋ . . . ।**

ನಿತ್ಯದಲ್ಲಿ ಬಿಡದೆ ಎಲ್ಲಾ ಗುಣವು ಇಲ್ಲಿ ತುಂಬಿದೆ. ಯಾವ ದೋಷ ಇವನಲಿಲ್ಲ ಎಂದು ಇವನು ಪೂರ್ಣನೆ. ಶ್ರೇಷ್ಠವಾದ ನಿಖಿಲವೇದವಾದದಿಂದ ವಾಚ್ಯನು. ಹುಟ್ಟು ಇರದ ಇವನು ಬ್ರಹ್ಮರುದ್ರಾದಿ ಸಂಪೂಜ್ಯನು. (ಒಲಿಸುವೆವು ಒಲಿಸುವೆವು ಇಂಥ ವಾಸುದೇವನ.)

**ವಿವರಣೆ:** ಸ್ವರ್ಚ್ಯತೇ ಹ.ತೀ. ಪಾಠ.

ಧಾರ್ಯತೇ ಯೇನ ವಿಶ್ವಂ ಸದಾಽಜಾದಿಕಂ
ವಾರ್ಯತೇಽಶೇಷದುಃಖಂ ನಿಜಧ್ಯಾಯಿನಾಮ್।
ಪಾರ್ಯತೇ ಸರ್ವಮನ್ಯೈರ್ನ ಯತ್ಪಾರ್ಯತೇ
ಕಾರ್ಯತೇ ಚಾಖಿಲಂ ಸರ್ವಭೂತೈಃ ಸದಾ ॥೯॥
ಪ್ರೀಣಯಾಮೋ . . . ।

ಸುರರಿಗೆಲ್ಲ, ವಿಶ್ವಕೆಲ್ಲ ಇವನೆ ನಿತ್ಯಧಾರಕ. ತನ್ನ ಧ್ಯಾನ ಮಾಡುವರ್ಗೆ ಇವನೆ ದುಃಖತಾರಕ. ಇತರರಿಂದ ಆಗದಿರುವ ಕಾರ್ಯಕೆಲ್ಲ ಪೂರಕ. ಎಲ್ಲರಿಂದ ಎಂದು ಕೂಡ ಇವನೆ ಕರ್ಮಕಾರಕ. (ಬಿಡದೆ ಅವನ ಒಲಿಸುವುದೆ ಭಕ್ತಜನರ ಕಾಯಕ.)

ಸರ್ವಪಾಪಾನಿ ಯತ್ಸಂಸ್ಮೃತೇಃ ಸಂಕ್ಷಯಂ
ಸರ್ವದಾ ಯಾಂತಿ ಭಕ್ತ್ಯಾ ವಿಶುದ್ಧಾತ್ಮನಾಮ್।
ಶರ್ವಗುರ್ವಾದಿಗೀರ್ವಾಣ ಸಂಸ್ಥಾನದಃ
ಕುರ್ವತೇ ಕರ್ಮ ಯತ್ಪ್ರೀತಯೇ ಸಜ್ಜನಾಃ ॥೧೦॥
ಪ್ರೀಣಯಾಮೋ . . . ।

ಭಕ್ತಿಯಿಂದ ಶುದ್ಧಾಂತಃಕರಣದ ಭಕ್ತಜನರ ಎಲ್ಲ ಪಾಪಗಳೂ ಯಾರ ನಿತ್ಯಸ್ಮರಣೆಯಿಂದ ಸರ್ವದಾ ನಾಶವಾಗುತ್ತವೆಯೋ ರುದ್ರನ ತಂದೆಯಾದ ಬ್ರಹ್ಮಾದಿ ದೇವತೆಗಳಿಗೆಲ್ಲಾ ಯಾರು ಯೋಗ್ಯಸ್ಥಾನಗಳನ್ನಿತ್ತಿರುವನೋ ಎಲ್ಲ ಸಜ್ಜನರು ಯಾರನ್ನು ಪ್ರೀತಿಗೊಳಿಸಲು ನಿತ್ಯ ನೈಮಿತ್ತಿಕ ಕರ್ಮಗಳನ್ನು ಆಚರಿಸುತ್ತಿರುವರೋ ಅಂಥ ವಾಸುದೇವನನ್ನು ಸಂತೋಷಪಡಿಸುವೆವು.

ಅಕ್ಷಯಂ ಕರ್ಮ ಯಸ್ಮಿನ್ ಪರೇ ಸ್ವರ್ಪಿತಂ
ಪ್ರಕ್ಷಯಂ ಯಾಂತಿ ದುಃಖಾನಿ ಯನ್ನಾಮತಃ।
ಅಕ್ಷರೋ ಯೋಽಜರಃ ಸರ್ವದೈವಾಮೃತಃ
ಕುಕ್ಷಿಗಂ ಯಸ್ಯ ವಿಶ್ವಂ ಸದಾಽಜಾದಿಕಮ್ ॥೧೧॥
ಪ್ರೀಣಯಾಮೋ . . . ।

ಯಾವ ಸರ್ವೋತ್ತಮನಾದ ಶ್ರೀವಾಸುದೇವನಲ್ಲಿ ಭಕ್ತಿಯಿಂದ ಸಮರ್ಪಿಸಿದ ಯಜ್ಞಾದಿ ಸತ್ಕರ್ಮಗಳು ಅಕ್ಷಯ ಫಲವನ್ನೀಯುವವೋ, ಯಾರ ನಾಮಸ್ಮರಣೆಯಿಂದ ದುಃಖಗಳೆಲ್ಲ ಸಂಪೂರ್ಣವಾಗಿ ನಾಶಹೊಂದುತ್ತವೆಯೋ ಯಾರು

ಯಾವುದೆ ಬಗೆಯ ನಾಶವಿರದವನು, ಮುಪ್ಪಿರದವನು, ಯಾವಾಗಲೂ ನಿತ್ಯಮುಕ್ತನು ಆಗಿರುವನೋ ಯಾರ ಒಡಲು ಬ್ರಹ್ಮ ಮುಂತಾದ ಸಮಗ್ರ ವಿಶ್ವದ ನೆಲೆಯೋ ಅಂಥ ವಾಸುದೇವನನ್ನು ಸಂತಸಪಡಿಸುವೆವು.

**ವಿವರಣೆ:** ಮಯಿ ಸರ್ವಾಣಿ ಕರ್ಮಾಣಿ ಸನ್ಯಸ್ಯಾಧ್ಯಾತ್ಮಚೇತಸಾ। (ಗೀ)
ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮಚಾಖಿಲಂ।
ತಥಾಪಿ ಮತ್ಕೃತಾ ಪೂಜಾ ತತ್ಪ್ರಸಾದೇನ ನಾನ್ಯಥಾ॥
ತದ್ಭಕ್ತಿಃ ತತ್ಫಲಂ ಮಹ್ಯಂ ತತ್ಪ್ರಸಾದಃ ಪುನಃ ಪುನಃ।
ಕರ್ಮನ್ಯಾಸೋ ಹರಾವೇವಂ ವಿಷ್ಣೋಃ ತೃಪ್ತಿಕರಃ ಸದಾ॥
ಇತಿ ಬ್ರಹ್ಮತರ್ಕವಚನಾತ್ (ಗೀ.ಭಾ. ೩-೩೦)

ನಾನು ಅಂದರೆ ಜೀವನು ಸ್ವತಂತ್ರಕರ್ತನಲ್ಲ. ಹರಿಯೇ ಸ್ವತಂತ್ರಕರ್ತನು. ನಾನು ಮಾಡುವುದೆಲ್ಲ ಅವನ ಪೂಜೆ. ಯದ್ಯಪಿ ನಾನು ಮಾಡುವ ಕರ್ಮಕ್ಕೆ ಹರಿಯೇ ಸ್ವತಂತ್ರಕರ್ತನು. ಆದರೂ ಅವನ ಪ್ರೇರಣೆಯಿಂದಲೇ ನಾನು ಕರ್ತನಾಗುವುದರಿಂದ ನಾನು ಮಾಡುವ ಕರ್ಮಗಳೆಲ್ಲ ಅವನ ಪೂಜಾರೂಪ ವಾದವುಗಳೆ ಹೊರತು ಅನ್ಯಥಾ ಅಲ್ಲ.

ನನಗೆ ಪೂಜಾಫಲವು ಪರಮಾತ್ಮನಲ್ಲಿ ಭಕ್ತಿ ಹಾಗೂ ಅವನ ಅಧಿಕ ಅನುಗ್ರಹವು. ಶ್ರೀಹರಿಯಲ್ಲಿ ಕರ್ಮವನ್ನು ಸದಾ ಸಮರ್ಪಣೆ ಮಾಡುವ ಪರಿಯಿದು. ಇದು ವಿಷ್ಣುವಿಗೆ ಸದಾ ತೃಪ್ತಿಕರವಾಗುವಂಥದು.

''ಅವಿದಿತ್ವಾಽಸ್ಮಿನ್ ಲೋಕೇ ಜುಹೋತಿ ಯಜತೇ ತಪಸ್ತಪ್ಯತೇ ಬಹೂನಿ ವರ್ಷ ಸಹಸ್ರಾಣಿ ಅಂತವದೇವ ಅಸ್ಯ ತದ್ಭವತಿ'' ಇತ್ಯಾದಿ ಶ್ರುತಿಭ್ಯಃ (ಗೀ.ಭಾ. ೨-೫೦) ಬ್ರಹ್ಮಜ್ಞಾನವಿಲ್ಲದೆ ಈ ಲೋಕದಲ್ಲಿ ಸಾವಿರಾರು ವರ್ಷಗಳ ಕಾಲ ಮಾಡಿದ ಯಜ್ಞ, ದಾನ, ತಪಸ್ಸುಗಳ ಪುಣ್ಯಗಳು ನಾಶಹೊಂದುತ್ತದೆ.

**ನಂದಿತೀರ್ಥೋರುಸನ್ನಾಮಿನೋ ನಂದಿನಃ**
**ಸಂದಧಾನಾಃ ಸದಾನಂದದೇವೇ ಮತಿಮ್।**
**ಮಂದಹಾಸಾರುಣಾಪಾಂಗದತ್ತೋನ್ನತಿಂ**
**ನಂದಿತಾಶೇಷದೇವಾದಿವೃಂದಂ ಸದಾ ॥೧೨॥**
**ಪ್ರೀಣಯಾಮೋ . . .।**

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ ದ್ವಾದಶಸ್ತೋತ್ರೇ ಅಷ್ಟಮೋಽಧ್ಯಾಯಃ ॥**

ನಿತ್ಯಾನಂದ ಪೂರ್ಣನಾದ ಶ್ರೀಹರಿಯಲ್ಲಿ ಮತಿಯನ್ನು ನೆಲೆಗೊಳಿಸಿ ಆನಂದಭರಿತರಾದ ಆನಂದತೀರ್ಥರೆಂಬ ಶುಭನಾಮವನ್ನು ಹೊಂದಿರುವ ನಾವು ಮಂದಹಾಸ ಬೆರೆತ ಕುಡಿನೋಟದಿಂದಲೇ ಅಭ್ಯುದಯವನ್ನಿತ್ತು ದೇವತಾ ವೃಂದವನ್ನು ಸಂತಸಪಡಿಸುತ್ತಿರುವ ಸರ್ವೋತ್ತಮನಾದ ವಾಸುದೇವನನ್ನು ಸಂತೋಷಪಡಿಸುವೆವು.

**ವಿವರಣೆ:** 'ನಂದಿರ್ದ್ಯೂತಾಙ್ಗ ಆನಂದೇ' ಇತಿ ಮೇದಿನೀ. 'ನಂದಿ' ಎಂದರೆ ಆನಂದ. ನಂದಿತೀರ್ಥ - ಆನಂದತೀರ್ಥ.

**॥ ಇತಿ ಅಷ್ಟಮೋಽಧ್ಯಾಯಃ॥**

# ನವಮೋಽಧ್ಯಾಯಃ

**ಅತಿಮತತಮೋಗಿರಿಸಮಿತಿ ವಿಭೇದನ**
**ಪಿತಾಮಹಭೂತಿದ ಗುಣಗಣನಿಲಯ।**
**ಶುಭತಮಕಥಾಶಯ ಪರಮ ಸದೋದಿತ**
**ಜಗದೇಕ ಕಾರಣ ರಾಮ ರಮಾರಮಣ** ॥ ೧ ॥

ಅರಿವಿಗೆ ನಿಲುಕದವನೆ ! ಅಜ್ಞಾನವೆಂಬ ಕಡುಕತ್ತಲೆಯ ಪರ್ವತವನ್ನು ತರಿವವನೆ ! ವಿಧಿಗೆ ವಿವಿಧೈಶ್ವರ್ಯವಿತ್ತವನೆ ! ಗುಣಗಣನಿಲಯನೆ ! ಸುಮಂಗಲಚರಿತನೆ ! ಜಗದಾಸರೆಯೆ ! ಸರ್ವೋತ್ತಮನೆ ! ಎಂದೆಂದೂ ಬೆಳಗುವವನೆ ! ವಿಶ್ವದ ಮುಖ್ಯ ನಿಮಿತ್ತ ಕಾರಣನೆ ! ರಮೆಯರಸನೆ ! ನೀನೆ ರಕ್ಷಕನಾಗೆನಗೆ.

**ವಿವರಣೆ:** ಹ್ಯ. ಪಾಠದಂತೆ ಇದು ಎಂಟನೆ ಸ್ತೋತ್ರ. 'ಕಥಾಽಶಯ', 'ರಮ ರಮ ರಮಣಾ' 'ತಮೊಗಿರಿ' 'ಪಿತಮಹ' 'ಜಗದೆಕ' ಎಂದು ಅಲ್ಲಿನ ಪಾಠ.

**ವಿಧಿಭವಮುಖಸುರ ಸತತಸುವಂದಿತ**
**ರಮಾಮನೋವಲ್ಲಭ ಭವ ಮಮ ಶರಣಮ್।**
**ಶುಭತಮ . . . ರಾಮ ರಮಾರಮಣ** ॥ ೨ ॥

ಬ್ರಹ್ಮರುದ್ರಾದಿ ದೇವತೆಗಳಿಂದ ಸದಾ ಭಕ್ತಿಯಿಂದ ವಂದಿತನೆ ! ರಮಾಮನಃಪ್ರಿಯನೆ ! ನನಗೆ ರಕ್ಷಕನಾಗು.

**ವಿವರಣೆ:** 'ರಮ್ಯಽಮನೋವಲ್ಲಭ' (ಹ್ಯ.ಪಾ.)

**ಅಗಣಿತಗುಣಗಣಮಯ ಶರೀರ ಹೇ**
**ವಿಗತಗುಣೇತರ ಭವ ಮಮ ಶರಣಮ್।**
**ಶುಭತಮ . . . ರಾಮ ರಮಾರಮಣ** ॥ ೩ ॥

ಎಣೆಯಿರದ ಗುಣಗಡಣವೆ ಮೈವೆತ್ತವನೆ ! ನಿರ್ದೋಷನೆ ! ನನಗೆ ನೀನೆ ಪಾಲಕ.

**ಅಪರಿಮಿತಸುಖನಿಧಿ ವಿಮಲಸುದೇಹ ಹೇ**

**ವಿಗತಸುಖೇತರ ಭವ ಮಮ ಶರಣಮ್।**

**ಶುಭತಮ . . . ರಾಮ ರಮಾ ರಮಣ ॥ ೪ ॥**

ಅನಂತ ಸುಖದ ತವರಾದ ನಿರ್ಮಲ ಶರೀರನೇ ! ದುಃಖರಹಿತನೇ ! ನೀನೆ ನನಗೆ ರಕ್ಷಕ.

**ಪ್ರಚಲಿತಲಯಜಲವಿಹರಣ ಶಾಶ್ವತ**

**ಸುಖಮಯಮೀನ ಹೇ ಭವ ಮಮ ಶರಣಮ್।**

**ಶುಭತಮ . . . ರಾಮರಮಾರಮಣ ॥ ೫ ॥**

ಉಕ್ಕುವ ಪ್ರಲಯ ಜಲಧಿಯಲಿ ವಿಹರಿಸುವವನೆ! ಶಾಶ್ವತನೆ! ಆನಂದಮಯ ಮತ್ಸ್ಯಾವತಾರಿಯೆ ! ನೀನೆನಗೆ ರಕ್ಷಕ.

**ಸುರದಿತಿಜ ಸುಬಲ ವಿಲುಲಿತ ಮಂದರ-**

**ಧರವರ ಕೂರ್ಮ ಹೇ ಭವ ಮಮ ಶರಣಮ್।**

**ಶುಭತಮ . . . ರಾಮ ರಮಾರಮಣ ॥ ೬ ॥**

ಸುರಾಸುರರು ಸೇರಿ ಬಲವಾಗಿ ಕಡಲು ಕಡೆದ ಮಂದರವ ಪೊತ್ತ ಶ್ರೇಷ್ಠ ಕೂರ್ಮನೆ ! ನೀನೆನಗೆ ಶರಣ.

**ಸಗಿರಿವರಧರಾತಲವಹ ಸುಸೂಕರ**

**ಪರಮವಿಬೋಧ ಹೇ ಭವ ಮಮ ಶರಣಮ್।**

**ಶುಭತಮ . . . ರಾಮ ರಮಾರಮಣ ॥ ೭ ॥**

ಮೇರು, ಮಂದರ ಮೊದಲಾದ ಗಿರಿಗಳಿಂದ ಕೂಡಿದ ಭೂಮಂಡಲವ ಹೊತ್ತ ಪರಮಜ್ಞಾನ ಸ್ವರೂಪನಾದ ಉತ್ತಮ ವರಾಹನೇ ನೀ ಎನಗೆ ರಕ್ಷಕ.

**ವಿವರಣೆ:** 'ಧರಽತಲ' 'ವಿಬೋಧ ಹೆ' ಹ್ಯ.ಪಾ.

**ಅತಿಬಲದಿತಿಸುತ ಹೃದಯ ವಿಭೇದನ ।**

**ಜಯ ನೃಹರೇಽಮಲ ಭವ ಮಮ ಶರಣಮ್॥**

**ಶುಭತಮ . . . ರಮಾರಮಣ ॥ ೮ ॥**

ಅತ್ಯಂತ ಬಲಿಷ್ಠನಾದ ಹಿರಣ್ಯಕಶಿಪುವಿನ ಎದೆ ಬಗೆದವನೆ ! ನಿರ್ಮಲನೆ ! ಜಯಶೀಲನೆ ! ನರಸಿಂಹನೆ ! ನೀ ಎನಗೆ ರಕ್ಷಕ.

**ಬಲಿಮುಖದಿತಿಸುತವಿಜಯವಿನಾಶನ**
**ಜಗದವನಾಜಿತ ಭವ ಮಮ ಶರಣಮ್।**

**ಶುಭತಮ . . . ರಾಮ ರಮಾರಮಣ** ॥ ೯ ॥

ಬಲಿರಾಜನೆ ಮುಂತಾದ ದೈತ್ಯರ ಗೆಲುವ ಹಾಳುಗೆಡಹಿದವನೆ ! ಜಗವ ಪಾಲಿಪನೆ ! ಯಾರಿಗೂ ಮಣಿಯದವನೆ ! ವಾಮನನೆ ! ನೀ ಎನಗೆ ರಕ್ಷಕ.

**ಅವಿಜಿತಕುನೃಪತಿಸಮಿತಿವಿಖಂಡನ**
**ರಮಾವರ ವೀರಪ ಭವ ಮಮ ಶರಣಮ್।**

**ಶುಭತಮ . . . ರಮಾರಮಣ** ॥ ೧೦ ॥

ಯಾರಿಂದಲೂ ಗೆಲ್ಲಲಾಗದ ದುಷ್ಟರಾಜರ ಸಮೂಹವನೆ ತರಿದವನೆ ! ರಮೆಯರಸನೆ ! ವೀರರ ಪಾಲಿಪ ಪರಶುರಾಮನೆ ! ನೀ ಎನಗೆ ರಕ್ಷಕ.

**ವಿವರಣೆ:** 'ರಮಾಽವರ' ಹ್ಯ.ಪಾ.

**ಖರತರನಿಶಿಚರದಹನ ಪರಾಮೃತ**
**ರಘೂವರ ಮಾನದ ಭವ ಮಮ ಶರಣಮ್।**

**ಶುಭತಮ . . . ರಾಮ ರಮಾರಮಣ** ॥ ೧೧ ॥

ಅತಿದುಷ್ಟರಾದ ರಾವಣಾದಿ ರಕ್ಕಸರ ಸುಟ್ಟವನೆ ! ನಿತ್ಯಮುಕ್ತನೆ ! ತಿಳಿವ ನೀಡುವ ರಘುವಂಶದರಸು ರಾಮಚಂದ್ರನೆ ! ನೀ ಎನಗೆ ರಕ್ಷಕ.

**ಸುಲಲಿತತನುವರ ವರದ ಮಹಾಬಲ**
**ಯದುವರ ಪಾರ್ಥಪ ಭವ ಮಮ ಶರಣಮ್।**

**ಶುಭತಮ . . . ರಮಾರಮಣ** ॥ ೧೨ ॥

ಅತಿಕೋಮಲತನುವಂತನೆ ! ಅಕ್ರೂರಾದಿಗಳಿಗೆ ವರವಿತ್ತವನೆ ! ಮಹಾಬಲರೂಪನೆ ! ಪಾರ್ಥರ ಪಾಲಿಪನೆ ! ಯದುವಂಶದೊಳವತರಿಸಿದ ಶ್ರೀಕೃಷ್ಣನೆ ! ನೀನೆನಗೆ ರಕ್ಷಕ.

**ವಿವರಣೆ:** 'ಸುಲಳಿತ' - ಹ್ಯ.ಪಾ.

**ದಿತಿಸುತಮೋಹನ ವಿಮಲ ವಿಬೋಧನ**
**ಪರಗುಣಬುದ್ಧ ಹೇ ಭವ ಮಮ ಶರಣಮ್।**
**ಶುಭತಮ . . . ರಾಮ ರಮಾರಮಣ ॥ ೧೩ ॥**

ಧರ್ಮಮಾರ್ಗದಲ್ಲಿದ್ದ ದೈತ್ಯರಿಗೆ ಮೋಹವಿತ್ತವನೆ ! ಸುರರಿಗೆ ನಿರ್ಮಲ ಬೋಧವನಿತ್ತವನೆ ! ಗುಣಪೂರ್ಣನಾದ ಬುದ್ಧನೆ ! ನೀ ಎನಗೆ ಶರಣು.

**ವಿವರಣೆ:** 'ವಿಮೋಹನ' -ಹ್ಯ.ಪಾ.

**ಕಲಿಮಲಹುತವಹ ಸುಭಗಮಹೋತ್ಸವ**
**ಶರಣದ ಕಲ್ಕೀಶ ಹೇ ! ಭವ ಮಮ ಶರಣಮ್।**
**ಶುಭತಮ . . . ರಾಮ ರಮಾರಮಣ ॥ ೧೪ ॥**

ಕಲಿಕಶ್ಮಲ ಸುಡುವ ಬೆಂಕಿಯೆ ! ಸಜ್ಜನರ ಮನೋಲ್ಲಾಸನೆ ! ವಿಶ್ವದಾಸರೆಯೆ! ಕಲ್ಕಿಪ್ರಭುವೆ ! ನೀನೆನಗೆ ಶರಣು.

**ವಿವರಣೆ:** 'ಕಲ್ಕೀಶ ಭವ' - ಹ್ಯ.ಪಾ.

**ಅಖಿಲಜನಿವಿಲಯ ಪರಸುಖಕಾರಣ**
**ಪರ ಪುರುಷೋತ್ತಮ ಭವ ಮಮ ಶರಣಮ್।**
**ಶುಭತಮ . . . ರಾಮ ರಮಾರಮಣ ॥ ೧೫ ॥**

ಎಲ್ಲರ ಹುಟ್ಟು, ಸಾವು, ಸೌಖ್ಯಗಳಿಗೆ ಕಾರಣನೇ ! ಪರಿಪೂರ್ಣನೇ ! ಪುರುಷೋತ್ತಮನೆ ! ನನಗೆ ನೀನೆ ಶರಣು.

**ಇತಿ ತವ ನುತಿವರಸತತರತೇರ್ಭವ**
**ಸುಶರಣಮುರುಸುಖತೀರ್ಥಮುನೇರ್ಭಗವನ್ ॥ ೧೬ ॥**

**ಶುಭತಮ ...... ರಾಮರಮಾರಮಣ॥**

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ**
**ದ್ವಾದಶಸ್ತೋತ್ರೇ ನವಮೋಽಧ್ಯಾಯಃ॥**

ಭಗವನ್ ! ಹೀಗೆ ಯಾವಾಗಲೂ ನಿನ್ನ ಸ್ತೋತ್ರ ಮಾಡುವುದರಲ್ಲೆ ಆಸಕ್ತನಾಗಿರುವ ಆನಂದತೀರ್ಥಮುನಿಗೆ ನೀನೆ ರಕ್ಷಕನಾಗು.

**॥ ಇತಿ ನವಮೋಽಧ್ಯಾಯಃ ॥**

# ದಶಮೋಽಧ್ಯಾಯಃ

**ಅವನ ಶ್ರೀಪತಿರಪ್ರತಿರಧಿಕೇಶಾದಿಭವಾದೇ।**
**ಕರುಣಾಪೂರ್ಣ ವರಪ್ರದ ಚರಿತಂ ಜ್ಞಾಪಯ ಮೇ ತೇ ॥೧॥**

ಜಗವ ಪಾಲಿಪನೇ, ಸರ್ವೋತ್ತಮನೇ ! ರುದ್ರಬೊಮ್ಮರಿಗೆ ಕಾರಣನೇ ! ಕರುಣೆ ತುಂಬಿದವನೆ ! ವರವ ನೀಡುವ ದೈವತನೇ ! ರಮೆಯ ಅರಸನು, ಅಸದೃಶನೂ ಆದ ನೀನು ನನಗೆ ನಿನ್ನ ಚರಿತೆಯ ತಿಳಿವ ನೀಡು.

**ಸುರವಂದ್ಯಾಧಿಪ ಸದ್ವರಭರಿತಾಶೇಷಗುಣಾಲಮ್।**
**ಕರುಣಾ . . . ಮೇ ತೇ ॥೨॥**

ಸುರವಂದ್ಯನೇ ! ಎಲ್ಲರನ್ನು ಅತ್ಯಧಿಕವಾಗಿ ಪಾಲಿಸುವವನೇ ! ಮುಕ್ತರಿಗೂ ಒಡೆಯನೇ ! ಅಶೇಷ ಗುಣಪೂರ್ಣನೇ ! ನಿನ್ನ ಚರಿತೆಯ ತಿಳಿವ ನೀಡು.

**ವಿವರಣೆ:** ಸುರವಂದ್ಯ + ಆಧಿಪ = ಆಧಿ (ಮಾನಸವ್ಯಥೆ)ಯ ದೆಸೆಯಿಂದ ನಮ್ಮನ್ನು ರಕ್ಷಿಸುವವನು. (ಆಧೇಃ ಪಾತಿ) ಸದ್ವರ - ಸತ್ = ಧೀರ - ಇಂದ್ರಿಯನಿಗ್ರಹವುಳ್ಳವರಿಗೆ (ಸನ್ ಸಾಧೌ ಧೀರಶಸ್ತಯೋಃ) ವರ = ಅಪರೋಕ್ಷಜ್ಞಾನಾದಿ ವರ ನೀಡುವವನು.

ಸತ್ - ಸತ್ಯವಾದ, ವರಃ - ವರವುಳ್ಳವನು. (ಸತ್ - ಸತ್ಯ ವರಃ ಯಸ್ಮಾತ್ ಸಃ) ಸತ್ - ಸಜ್ಜನರಿಂದ, ವರ - ವರಣೀಯನು. ಸತ್ - ಸಜ್ಜನರನ್ನು, ವರ - ಭಕ್ತರನ್ನಾಗಿ ಸ್ವೀಕರಿಸುವವನು.

**ಸಕಲಧ್ವಾಂತ ವಿನಾಶಕ ಪರಮಾನಂದಸುಧಾಹೋ**
**ಕರುಣಾ . . . ಮೇ ತೇ ॥೩॥**

ಎಲ್ಲ ಸಜ್ಜನರ ಅಜ್ಞಾನವೆಂಬ ಕತ್ತಲೆಯನ್ನು ಪರಿಹರಿಸುವವನೇ ! ಪರಮಾನಂದವೆಂಬ ಅಮೃತ ತುಂಬಿದವನೇ ! ಅಚ್ಚರಿಯೊಳಚ್ಚರಿಯೇ ! ನಿನ್ನ ಚರಿತೆಯ ತಿಳಿವ ನೀಡು.

**ವಿವರಣೆ:** 'ವಿನಾಶನ' - ಹ್ಯ.ಪಾ. ಸುಧಾಹೋ - ಸುಧಾ-ಮಧುರಾ ಆಹೂಃ- ಆಹೂತಿಃ ಯಸ್ಯ. ಅಮೃತದಂತೆ ಸವಿಯಾದ ನಾಮ (ಹೆಸರು)ವುಳ್ಳವನೇ.

'ಮಧುರಾದಪಿ ಯನ್ಮಧುರಂ ಮಧುರಾನಾಥಸ್ಯ ನಾಮ' (ಸಕಲಧ್ವಾಂತ ವಿನಾಶನೀ ಪರಮಾನಂದದಾತ್ರೀ ಆಹುಃ ಯಸ್ಯ - ಎಲ್ಲ ಬಗೆಯ ಅನಿಷ್ಟ ವೆಂಬ ಕತ್ತಲೆಯ ನಾಶಕವು, ಮೋಕ್ಷಾನಂದಪ್ರದವೂ ಆದ ನಾಮವುಳ್ಳವನೇ!)

**ತ್ರಿಜಗತ್ಪೋತ ಸದಾರ್ಚಿತಚರಣಾಶಾಪತಿಧಾತೋ।**
**ಕರುಣಾ . . . ಮೇ ತೇ ॥ ೪ ॥**

ಮೂರು ಜಗವೆಂಬ ಸಾಗರದ ಅಂಬಿಗನೇ ! ಸಜ್ಜನರೆರಗಿದ ಪಾದದವನೆ ! ದಿಕ್ಪಾಲಕರ ಪೋಷಕನೆ ! ನಿನ್ನಚರಿತೆಯ ತಿಳಿವ ನೀಡು.

**ವಿವರಣೆ:** ತ್ರಿಜಗತ್ಪೋತ ಸದಾರ್ಚಿತಚರಣ - ಮೂರು ಜಗತ್ತಿನಲ್ಲಿರುವ ಬ್ರಹ್ಮಾದಿ ಮಕ್ಕಳಿಂದ ಸದಾ ಪೂಜಿತವಾದ ಚರಣವುಳ್ಳವನೇ !

ಆಶಾಪತಿಧಾತೋ-ಪ್ರಾಣೋ ವಾ ಆಶಾಯಾ ಭೂಯಾನ್ ಎಂಬ ಶ್ರುತಿಯಲ್ಲಿ ಆಶಾ ಎಂದರೆ ಸರಸ್ವತಿ ಎಂದು ವ್ಯಾಖ್ಯಾನಿಸಿದೆ. ಆಶಾ - ಸರಸ್ವತಿಯ, ಪತಿ -ಪತಿಯಾದಬ್ರಹ್ಮದೇವರ, ಧಾತೋ - ಧಾರಕನೇ !

ಆಃ - ಪಿತಾಮಹಃ ತಸ್ಯ ಶಂ ಯಯೇತಿ ಆಶಾ ಲಕ್ಷ್ಮೀಃ। ತಸ್ಯಾಃ ಪತಿಃ। ಆಃ ಬ್ರಹ್ಮಾ, ತಸ್ಯ, ಶಾ-ಶಾಸನಶೀಲಾ ರಮಾ ಇತಿ ವಾ। ಅಕಾರೋ ವಾಸುದೇವಃ ಸ್ಯಾದಾಕಾರಶ್ಚ ಪಿತಾಮಹಃ ಇತ್ಯೇಕಾಕ್ಷರಕೋಷಃ।

ಆ - ಬ್ರಹ್ಮನಿಗೆ 'ಶ' ಸುಖವು ಯಾರಿಂದಲೋ ಆ ರಮೆಯೆ ''ಆಶಾ''. ಅಥವಾ ಬ್ರಹ್ಮನನ್ನು ಶಾಸನ ಮಾಡುವುದರಿಂದ ಆಶಾ - ರಮಾ, ಆಶಾಪತಿ - ರಮಾಪತಿಯು ಹಾಗೂ ಧಾತೋ - ಧಾರಕನೂ ಆದ ಶ್ರೀಹರಿಯೇ !

**ತ್ರಿಗುಣಾತೀತ ವಿಧಾರಕ ಪರಿತೋ ದೇಹಿ ಸುಭಕ್ತಿಮ್।**
**ಕರುಣಾ . . . ಜ್ಞಾಪಯ ಮೇ ತೇ ॥ ೫ ॥**

ಸತ್ತ್ವರಜಸ್ತಮಸ್ ಮೂರುಗುಣಗಳನ್ನು ಮೀರಿ ನಿಂತವನೆ ! ವಿಶೇಷವಾಗಿ ಜಗವ ಹೊತ್ತವನೆ! ಎಲ್ಲ ಕಾಲದಲ್ಲಿ ಎಲ್ಲಕ್ಕಿಂತಲೂ ನಿನ್ನಲ್ಲಿ ಅತ್ಯಂತವಾದ ಭಕ್ತಿಯನ್ನು ನೀಡೆನಗೆ.

**ವಿವರಣೆ:** ಪರಃ ಅಸ್ತಿ ಯೇಷಾಂ ತೇ ಪರಯಃ। ಹರಿಸರ್ವೋತ್ತಮತ್ವ ಜ್ಞಾನಿನಃ।

ತೇಭ್ಯಃ ಸುಭಕ್ತಿಂ - ಸಚ್ಛಾಸ್ತ್ರಶ್ರವಣಾದಿರೂಪಾಂ ಭಕ್ತಿಂ ದೇಹಿ ಇತಿ ವಾ। ಭಕ್ತಿಂ 'ಶ್ರವಣಾದಿಲಕ್ಷಣಾಂ' ಇತಿ ಪ್ರಮೇಯ ದೀಪಿಕಾ.

ಪರಿತಃ- ಹರಿಸರ್ವೋತ್ತಮತ್ವಜ್ಞಾನಿಗಳ ದೆಸೆಯಿಂದ ಸಚ್ಛಾಸ್ತ್ರಶ್ರವಣಾದಿ ರೂಪವಾದ ಭಕ್ತಿಯನ್ನು ನೀಡು.

**ಶರಣಂ ಕಾರಣಭಾವನ ಭವ ಮೇ ತಾತ ಸದಾಽಲಮ್।**
**ಕರುಣಾ . . . ಜ್ಞಾಪಯ ಮೇ ತೇ ॥ ೬ ॥**

ಜಗತ್ಕಾರಣಗಳಾದ ಮಹದಾದಿಗಳನ್ನು ಸೃಷ್ಟಿಯಲ್ಲಿ ಸಮರ್ಥವಾಗಿಸುವವನೇ! ತಂದೆಯೇ! ನನಗೆ ಎಂದೆಂದೂ ಚೆನ್ನಾಗಿ ರಕ್ಷಕನಾಗು.

**ವಿವರಣೆ:** ಕಾರಣಭಾವನ - ಕಾರಣಭಾವಂ ಲಯಂ ನಯತೀತಿ ಕಾರಣಭಾವನಃ ತತ್ಸಂಬುದ್ಧಿಃ। ಕಾರಣಾನಿ ಸತ್ತಾಂ ನಯತೀತಿ ಕಾರಣಭಾವನಃ।

ಕಾರಣಾನಾಂ - ಕರ್ಮಣಾಂ, ಭಾವನಂ - ವ್ಯಾಪಾರಃ ಯೇನ ಇತಿ ವಾ। ಸಂಚಿತಾದಿ ಸಂಸಾರಹೇತುಭೂತಕರ್ಮ ವ್ಯಾಪಾರ ನಿಯಾಮಕತಯಾ ವಿವಮುಕ್ತಿಃ। ಹೇತುಗರ್ಭ ವಿಶೇಷಣಂ। ತೇಭ್ಯೋ ರಕ್ಷಕೋ ಭವ ಇತ್ಯರ್ಥಃ।

ಕಾರಣಭಾವನ - ಪ್ರಲಯ ಪ್ರೇರಕನೇ!
ಕಾರಣಭಾವನ - ಜಗತ್ಕಾರಣ ಪದಾರ್ಥಗಳಿಗೆ ಸತ್ತಾಪ್ರದನೇ !

ಕಾರಣಭಾವನ - ಸಂಸಾರಕ್ಕೆ ಕಾರಣಗಳಾದ ಸಂಚಿತ, ಆಗಾಮಿ, ಪ್ರಾರಬ್ಧ ಕರ್ಮಗಳ ನಿಯಾಮಕನೇ ! ಶರಣಂ ಭವ - ಅಂತಹ ಕರ್ಮಗಳಿಗೆ ರಕ್ಷಣೆ ನೀಡು.

**ಮರಣಪ್ರಾಣದ ಪಾಲಕ ಜಗದೀಶಾಽವ ಸುಭಕ್ತಿಮ್।**
**ಕರುಣಾ . . . ಜ್ಞಾಪಯ ಮೇ ತೇ ॥ ೭ ॥**

ಮರಣವನ್ನು, ಉತ್ತಮ ಜೀವನ (ಮೋಕ್ಷ) ವನ್ನೂ ನೀಡುವವನೆ! ಪಾಲಕನೇ! ಜಗದೀಶನೇ! ಉತ್ತಮ ಭಕ್ತಿಯನ್ನು ವಿಘ್ನಗಳಿಂದ ರಕ್ಷಣೆ ಮಾಡು.

**ವಿವರಣೆ:** ಹಿಂದಿನ ಶ್ಲೋಕದಲ್ಲಿ ಪ್ರಾರ್ಥಿಸಿದ ಭಕ್ತಿಯನ್ನು ಈ ಪದ್ಯದಲ್ಲಿ ವಿಘ್ನಗಳಿಂದ ರಕ್ಷಣೆ ಮಾಡೆಂದು ಕೇಳಲಾಗುತ್ತಿದೆ.

ಮರಣಪ್ರಾಣದ - ಮ್ರಿಯತೇ ಅನೇನ ಇತಿ ಮರಣಶಬ್ದಃ ವತ್ಸನಾಭಾಖ್ಯೇ

ವಿಷೇ ಪ್ರಯುಜ್ಯತೇ। ತಾದೃಶ ವಿಷಪಾನೇಽಪಿ ಪ್ರಾಣಂ - ಜೀವನಂ ವಾಯೋಃ ಭಗವಾನ್ ದದಾವಿತಿ ತಾದೃಶೋಕ್ತಿಃ ॥

ಮರಣ ಶಬ್ದಕ್ಕೆ ಮರಣಸಾಧನವಾದ 'ವತ್ಸನಾಭ' ಎಂಬ ವಿಷ ಎಂದರ್ಥ. ಅಂತಹ ವಿಷಪಾನ ಮಾಡಿದಾಗಲೂ ವಾಯುದೇವನಿಗೆ ಜೀವನವನ್ನು ಕೊಟ್ಟ ಶ್ರೀಹರಿಯೆ ! ಎಂದು ಭಾವ.

**ತರುಣಾದಿತ್ಯಸವರ್ಣಕ ಚರಣಾಬ್ಜಾಮಲಕೀರ್ತೇ।**
**ಕರುಣಾ . . . ಜ್ಞಾಪಯ ಮೇ ತೇ ॥ ೮ ॥**

ಎಳೆ ಸೂರ್ಯನ ಪೋಲ್ವ ಹೊಂಬಣ್ಣದ ಸೊಗಸಿನ ಅಡಿದಾವರೆಯವನೆ ! ನಿರ್ಮಲಗೊಳಿಸುವ ಪವಿತ್ರ ಕೀರ್ತಿವಂತನೇ ! ನಿನ್ನ ಚರಿತೆಯ ತಿಳಿವ ನೀಡೆನಗೆ.

**ವಿವರಣೆ:**ಈ ಪದ್ಯದಿಂದ ಅಧ್ಯಾಯದ ಸಮಾಪ್ತಿಯವರೆಗೆ ಭಗವಂತನ ಅವಯವದ ವರ್ಣನೆ ಮಾಡಲಾಗಿದೆ.

**ಸಲಿಲಪ್ರೋತ್ಥಸರಾಗಕಮಣಿವರ್ಣೋಚ್ಚನಖಾದೇ।**
**ಕರುಣಾ . . . ಜ್ಞಾಪಯ ಮೇ ತೇ ॥ ೯ ॥**

ನೀರಲ್ಲಿ ಬೆಳೆದು ಅರಳಿದ ಕೆಂದಾವರೆಯ ಬಣ್ಣದ ಉನ್ನತ ಉಗುರ ತುದಿಯವನೇ ! ನಿನ್ನ ಚರಿತೆಯ ತಿಳಿವ ನೀಡು.

**ಖಜತೂಣೀನಿಭಪಾವನವರಜಂಘಾಽಮಿತಶಕ್ತೇ।**
**ಕರುಣಾ . . . ಜ್ಞಾಪಯ ಮೇ ತೇ ॥ ೧೦ ॥**

ಮನಸಿಜನಾದ ಕಾಮನ ಬತ್ತಳಿಕೆಯಂತಿರುವ, ಪಾವನವಾದ ಶ್ರೇಷ್ಠವಾದ ಅಪ್ರಾಕೃತವಾದ ಮೊಣಗಾಲವನೇ ! ಅಪಾರಶಕ್ತಿ ಸಂಪನ್ನನೆ ! ನಿನ್ನ ಚರಿತೆಯ ತಿಳಿವ ನೀಡು.

**ವಿವರಣೆ:** 'ಕಜತೂಣೀ' ಪ್ರ.ಪಾ. ಕ-ಚಿತ್ತದಿಂದ ಜ- ಹುಟ್ಟಿದ ಕಾಮನು.

**ಇಭಹಸ್ತಪ್ರಭಶೋಭನಪರಮೋರುಸ್ಥರಮಾಲೇ।**
**ಕರುಣಾ . . . ಜ್ಞಾಪಯ ಮೇ ತೇ ॥ ೧೧ ॥**

ಆನೆಯಸೊಂಡಿಲಂತಿರುವ ಸೊಗಸಿನ, ಉತ್ತಮವಾದ ತೊಡೆಯ ಮೇಲೆ ರಮೆಯೆಂಬ ದುಂಬಿಯುಳ್ಳವನೆ ! ನಿನ್ನ ಚರಿತೆಯ ತಿಳಿವ ನೀಡು.

**ವಿವರಣೆ:** ಆನೆಯ ಸೊಂಡಿಲ ಮೇಲೆ ಹರಿವ ಮದಜಲದ ಗಂಧದ ಲೋಭದಿಂದ ದುಂಬಿಗಳು ನೆಲೆಸುವಂತೆ ಸೊಂಡಿಲಿನ ಆಕಾರದ ತೊಡೆಯಲ್ಲಿ ದುಂಬಿಯಂತೆ ಪ್ರೀತಿಯಿಂದ ಕುಳಿತಿಹಳು ಸಿರಿದೇವಿಯು.

**ಅಸನೋತ್ಫುಲ್ಲಸುಪುಷ್ಪಕಸಮವರ್ಣಾವರಣಾಂತೇ।**
**ಕರುಣಾ . . . ಜ್ಞಾಪಯ ಮೇ ತೇ** ॥ ೧೨ ॥

ಚೆನ್ನಾಗಿ ಅರಳಿದ ಹೊನ್ನೆ ಹೂವಿನಂಥ ಚೆಲುವ ಪೀತಾಂಬರವ ಧರಿಸಿದವನೆ! ಅಂತ್ಯಕಾಲದಲ್ಲಿ ನಿನ್ನ ಚರಿತೆಯ ತಿಳಿವ ನೀಡೆನಗೆ.

**ಶತಮೋದೋದ್ಭವ ಸುಂದರವರ ಪದ್ಮೋತ್ಥಿತನಾಭೇ।**
**ಕರುಣಾ . . . ಜ್ಞಾಪಯ ಮೇ ತೇ** ॥ ೧೩ ॥

ಬೊಮ್ಮನುದಿಸಿದ ಚೆಲುತಾವರೆಯ ನೆಲೆಯಾದ ಹೊಕ್ಕುಳವನೇ ! ನಿನ್ನ ಚರಿತೆಯ ತಿಳಿಸು.

**ಜಗದಾಗೂಹಕ ಪಲ್ಲವ ಸಮಕುಕ್ಷೇ ಶರಣಾದೇ।**
**ಕರುಣಾ . . . ಜ್ಞಾಪಯ ಮೇ ತೇ** ॥ ೧೪ ॥

ಜಗವ ಅಡಗಿಸಿಕೊಂಡಿರುವ, ಚಿಗುರಿನಂತೆ ನಸೆಯಾದ ಉದರವುಳ್ಳವನೇ! ರಕ್ಷಕರಾದ ಬ್ರಹ್ಮಾದಿಗಳಿಗೂ ಕಾರಣನೇ ! ನಿನ್ನ ಚರಿತೆಯ ತಿಳಿವ ನೀಡು.

**ಜಗದಂಬಾಮಲ ಸುಂದರಗೃಹವಕ್ಷೋವರಯೋಗಿನ್।**
**ಕರುಣಾ . . . ಜ್ಞಾಪಯ ಮೇ ತೇ** ॥ ೧೫ ॥

ಜಗನ್ಮಾತೆಯಾದ ಲಕ್ಷ್ಮಿಯ ನಿರ್ಮಲ, ಸುಂದರ ನೆಲೆಯಾದ ಎದೆಯವನೇ! ಪರಮ ಯೋಗಿ ಪುರುಷನೇ ! ನಿನ್ನ ಚರಿತೆಯ ತಿಳಿಸು.

**ದಿತಿಜಾಂತಪ್ರದ ಚಕ್ರಧರ ಗದಾಯುಗ್ವರಬಾಹೋ।**
**ಕರುಣಾ . . . ಜ್ಞಾಪಯ ಮೇ ತೇ** ॥ ೧೬ ॥

ಅಸುರರನ್ನು ಸದೆಯುವ ಚಕ್ರ, ಶಂಖ,ಗದೆಗಳನ್ನು ಧರಿಸಿರುವ ಉತ್ತಮ ಬಾಹುಗಳುಳ್ಳವನೇ ! ನಿನ್ನ ಚರಿತೆಯ ತಿಳಿಸು.

**ಪರಮಜ್ಞಾನ ಮಹಾನಿಧಿವದನ ಶ್ರೀರಮಣೇಂದೋ।**
**ಕರುಣಾ . . . ಜ್ಞಾಪಯ ಮೇ ತೇ** ॥ ೧೭ ॥

ತುಂಬು ತಿಳಿವಿನಾಸರೆಯು, ರಮೆಗೆ ಸಂತಸವೀವ ಚಂದಿರನಂಥ ಮೋರೆಯವನೇ ! ನಿನ್ನ ಚರಿತೆಯ ತಿಳಿವ ನೀಡು.

**ನಿಖಿಲಾಘೌಘವಿನಾಶನ ಪರಸೌಖ್ಯಪ್ರದದೃಷ್ಟೇ।**
**ಕರುಣಾ . . . ಜ್ಞಾಪಯ ಮೇ ತೇ ॥ ೧೮ ॥**

ತನ್ನವರ ಪಾಪರಾಶಿಯನೆಲ್ಲ ಪರಿಹರಿಸಿ, ಪರಮ ಸೌಖ್ಯವ (ಮೋಕ್ಷ)ನೀವ ಕುಡಿನೋಟದವನೇ ! ನಿನ್ನ ಚರಿತೆಯ ತಿಳಿಸು.

**ಪರಮಾನಂದಸುತೀರ್ಥ ಮುನಿರಾಜೋ ಹರಿಗಾಥಾಮ್।**
**ಕೃತವಾನ್ನಿತ್ಯ ಸುಪೂರ್ಣಕ ಪರಮಾನಂದ ಪದೈಷೀ ॥ ೧೯ ॥**

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ**
**ದ್ವಾದಶಸ್ತೋತ್ರೇ ದಶಮೋಧ್ಯಾಯಃ ॥**

ಅಳಿವಿರದ ತುಂಬು ಸಂತಸದ ಸೆಲೆಯಾದ ಶ್ರೀಹರಿಯ ಬಯಸುವ ಸ್ವಭಾವದವರಾದ ಪರಮಾನಂದಪ್ರದ ಶಾಸ್ತ್ರವನ್ನು ರಚಿಸಿ ಆನಂದತೀರ್ಥರೆನಿಸಿದ ಮುನಿರಾಜರು ಈ ಹರಿಗಾಥೆಯನ್ನು ರಚಿಸಿದರು.

**ವಿವರಣೆ:** ಪರಮಾನಂದ - ಪೂರ್ಣಾನಂದರಾದ ಬಾದರಾಯಣರೇ, ಸುತೀರ್ಥ - ಶ್ರೇಷ್ಠ ಗುರುಗಳಾಗಿರುವ, ಮುನಿರಾಜಃ - ಮಧ್ವಮುನಿರಾಜರು ಎಂದೂ ಅರ್ಥೈಸಬಹುದು.

'ಪರಮಾನಂದಸುತೀರ್ಥಸುಮುನಿರಾಜೋ' 'ಪರಮಾನಂದಪದೈಷಿನ್' ಹ್ಯ.ಪಾ.

**॥ ಇತಿ ದಶಮೋಽಧ್ಯಾಯಃ ॥**

## ಏಕಾದಶೋಽಧ್ಯಾಯಃ

**ಉದೀರ್ಣಮಜರಂ ದಿವ್ಯಮಮೃತಸ್ಯಂದ್ಯಧೀಶಿತುಃ।**
**ಆನಂದಸ್ಯ ಪದಂ ವಂದೇ ಬ್ರಹ್ಮೇಂದ್ರಾದ್ಯಭಿ ವಂದಿತಮ್ ॥ ೧ ॥**

ಉತ್ಕೃಷ್ಟನು, ಮುಪ್ಪಿರದವನು, ಅಲೌಕಿಕನು, ಅಮೃತವನ್ನು ಸುರಿಸುವವನು, ಜಗದಧೀಶ್ವರನು, ಬ್ರಹ್ಮ ಇಂದ್ರಾದಿ ದೇವತೆಗಳಿಂದ ಭಕ್ತಿಯಿಂದ ನಮಸ್ಕೃತನು, ಆನಂದಸ್ವರೂಪನು. ಇಂತಹ ಶ್ರೀಹರಿಗೆ ವಂದನೆಯು.

**ಸರ್ವವೇದಪದೋದ್ಗೀತಮಿಂದಿರಾವಾಸಮುತ್ತಮಮ್।**
**ಆನಂದಸ್ಯ . . . ವಂದಿತಮ್ ॥ ೨ ॥**

ಸರ್ವವೇದ ಪದಗಳಿಂದಲೂ ಸರ್ವೋತ್ತಮನೆಂದು ಪ್ರತಿಪಾದಿತನು, ಇಂದಿರೆಯ ಆವಾಸನೂ ಆದ ಪುರುಷೋತ್ತಮನನ್ನು ವಂದಿಸುವೆನು.

**ವಿವರಣೆ:** 'ಇಂದಿರಾಧಾರಮುತ್ತಮಮ್' ಪ್ರ.ಪಾ.

**ಸರ್ವದೇವಾದಿದೇವಸ್ಯ ವಿದಾರಿತ ಮಹತ್ತಮಃ।**
**ಆನಂದಸ್ಯ . . . ವಂದಿತಮ್ ॥ ೩ ॥**

ಎಲ್ಲಾ ಹಿರಿಯ ದೈವತಕು ಹಿರಿಯ ದೇವನು, ಅಂತರಂಗದ ಕಡುಕತ್ತಲೆಯನ್ನು ನಾಶಗೈಸುವವನೂ ಆದ ಶ್ರೀಹರಿಯನ್ನು ವಂದಿಸುವೆನು.

**ಉದಾರಮಾದರಾನ್ನಿತ್ಯಮನಿಂದ್ಯಂ ಸುಂದರೀಪತೇಃ।**
**ಆನಂದಸ್ಯ . . . ವಂದಿತಮ್ ॥ ೪ ॥**

ಎಲ್ಲಕ್ಕಿಂತಲೂ ಮಿಗಿಲಾದವನು, ನಿತ್ಯದಲ್ಲು ಸ್ತುತ್ಯನು, ಸುಂದರಿಯಾದ ರಮೆಯ ಇನಿಯನೂ ಆದ ಶ್ರೀಹರಿಗೆ ಆದರದ ವಂದನೆಯು.

**ಇಂದೀವರೋದರನಿಭಂ ಸುಪೂರ್ಣಂ ವಾದಿಮೋಹದಮ್।**
**ಆನಂದಸ್ಯ . . . ವಂದಿತಮ್ ॥ ೫ ॥**

ಕನ್ನೈದಿಲೆಯ ನಡುಭಾಗದಂಥ ಸೊಗಸಿನವನು, ಗುಣಪೂರ್ಣನು, ದುರ್ವಾದಿಗಳಿಗೆ ಮಿಥ್ಯಾಜ್ಞಾನಪ್ರದನು ಆದ ಶ್ರೀಹರಿಗೆ ವಂದನೆಯು.

**ವಿವರಣೆ:** ''ವಾದಿಮೋಹನಮ್'' ಹ್ಯ.ಪಾ.

**ದಾತೃಸರ್ವಾಮರೈಶ್ವರ್ಯ ವಿಮುಕ್ತ್ಯಾದೇರಹೋ ವರಮ್।**
**ಆನಂದಸ್ಯ . . . ವಂದಿತಮ್** ॥ ೬ ॥

ಎಲ್ಲಾ ದೇವತೆಗಳಿಗೆ ಸಿರಿ, ಬಿಡುಗಡೆ, ಅಸ್ತಿತ್ವ, ಅರಿವು, ಪ್ರವೃತ್ತಿಗಳಿಗೆ ಪ್ರೇರಕನು, ಆಶ್ಚರ್ಯರೂಪನು, ಶ್ರೇಷ್ಠನು ಆದ ಶ್ರೀಹರಿಗೆ ವಂದನೆಯು.

**ದೂರಾದ್ದೂರತರಂ ಯತ್ತು ತದೇವಾಂತಿಕಮಂತಿಕಾತ್।**
**ಆನಂದಸ್ಯ . . . ವಂದಿತಮ್** ॥ ೭ ॥

ಭಕ್ತರಲ್ಲದವರಿಗೆ ದೂರಕ್ಕಿಂತಲೂ ದೂರ. ಭಕ್ತರಿಗೆ ಹತ್ತಿರಕ್ಕಿಂತಲೂ ಹತ್ತಿರನು. ಇಂಥ ಶ್ರೀಹರಿಗೆ ವಂದನೆಯು.

**ಪೂರ್ಣಸರ್ವಗುಣೈಕಾರ್ಣಮನಾದ್ಯಂತಂ ಸುರೇಶಿತುಃ।**
**ಆನಂದಸ್ಯ . . . ವಂದಿತಮ್** ॥ ೮ ॥

ಪೂರ್ಣಗಳಾದ ಎಲ್ಲಾ ಗುಣಗಳು ತುಂಬಿ ತುಳುಕುವ ಕಡಲು. ತುದಿ-ಕೊನೆಯಿರದ ಸುರರೊಡೆಯನು ಆದ ಶ್ರೀಹರಿಗೆ ವಂದನೆಯು.

**ಆನಂದತೀರ್ಥಮುನಿನಾ ಹರೇರಾನಂದರೂಪಿಣಃ।**
**ಕೃತಂ ಸ್ತೋತ್ರಮಿದಂ ಪುಣ್ಯಂ ಪಠನ್ನಾನಂದತಾಮಿಯಾತ್** ॥ ೯ ॥

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ**
**ದ್ವಾದಶಸ್ತೋತ್ರೇ ಏಕಾದಶೋಽಧ್ಯಾಯಃ ॥**

ಆನಂದರೂಪಿಯಾದ ಶ್ರೀಹರಿಯ ಈ ಸ್ತೋತ್ರವು ಪುಣ್ಯಸಾಧನವು. ಆನಂದ ತೀರ್ಥ ಎಂಬ ಮುನಿಯಿಂದ ರಚಿತವು. ಪಠಿಸುವವರಿಗೆ ಸ್ವರೂಪಾನಂದ ಪ್ರದವು.

**ವಿವರಣೆ:** ''ಪಠನ್ನಾನಂದಮಾಪ್ನುಯಾತ್'' ಹ್ಯ.ಪಾ.

**॥ ಇತಿ ಏಕಾದಶೋಽಧ್ಯಾಯಃ ॥**

# ದ್ವಾದಶೋಽಧ್ಯಾಯಃ

**ಆನಂದಮುಕುಂದ ಅರವಿಂದನಯನ।**
**ಆನಂದತೀರ್ಥ ಪರಾನಂದವರದ** ॥ ೧ ॥

ಪೂರ್ಣಾನಂದರೂಪನೆ ! ಭವದಿಂದ ಬಿಡುಗಡೆಯನೀವವನೆ ! ಅರಳುದಾವರೆ ಕಣ್ಣನವನೆ ! ಆನಂದತೀರ್ಥರಿಗೆ ಉತ್ತಮಾನಂದ ನೀಡುವ ದೈವವೆ! ನಿನಗೆ ವಂದನೆಯು.

**ವಿವರಣೆ:** ಆನಂದ = ಸ್ವರೂಪಾನಂದಪ್ರದವಾದ, ತೀರ್ಥ = ಶಾಸ್ತ್ರದಲ್ಲಿ, ಪರ = ಆಸಕ್ತರಾದ ಸಜ್ಜನರಿಗೆ, ಆನಂದ ವರದ = ಆನಂದ ನೀಡುವವನೆ ! (ಆನಂದಕರಂ ಚ ತತ್ ತೀರ್ಥಂ ಚ ಆನಂದ ತೀರ್ಥಂ ! ಆನಂದತೀರ್ಥೇ ಪರಾಃ ಆನಂದತೀರ್ಥಪರಾಃ। ಆನಂದತೀರ್ಥಪರಾಣಾಂ ಆನಂದವರದ !)

**ಸುಂದರೀಮಂದಿರ ಗೋವಿಂದ ವಂದೇ।**
**ಆನಂದ . . . ವರದ** ॥ ೨ ॥

ಸುಂದರಿಯಾದ ಇಂದಿರೆಯ ಮಂದಿರನೆ ! ಗೋವಿಂದನೇ ! ನಿನಗೆ ವಂದನೆಯು.

**ವಿವರಣೆ:** ''ಸುಂದರಿ ಮಂದಿರ'' ಹ್ಯ.ಪಾ.

**ಚಂದ್ರಸುರೇಂದ್ರಸುವಂದಿತ ವಂದೇ।**
**ಆನಂದ . . . ವರದ** ॥ ೩ ॥

ಚಂದ್ರನಿಂದ, ಸುರನಾಯಕನಾದ ಇಂದ್ರನಿಂದಲೂ ಚೆನ್ನಾಗಿ ವಂದಿತನೆ ! ನಿನಗೆ ವಂದನೆಯು.

**ಚಂದ್ರಕಮಂದಿರನಂದಕ ವಂದೇ।**
**ಆನಂದ . . . . . .ವರದ** ॥ ೪ ॥

ನವಿಲುಗರಿಗಳನ್ನು ತಲೆಯಲ್ಲಿ ಧರಿಸಿ ನೋಡುವವರಿಗೆ ಮುದ ನೀಡುವ ಶ್ರೀಕೃಷ್ಣ! ನಿನ್ನನ್ನು ವಂದಿಸುತ್ತೇನೆ.

**ವಿವರಣೆ:** ಚಂದ್ರಕಮಂದಿರ, ನಂದಕ ಎಂದು ಭಿನ್ನಪದವಾಗಿಯೂ ವ್ಯಾಖ್ಯಾನಿಸಬಹುದು. ಚಂದ್ರ-ಚಂದ್ರನಿಗೆ ಮತ್ತು ಕ - ದಕ್ಷಪ್ರಜಾಪ್ರತಿಗೆ (ಪರಸ್ಪರ ವಿರೋಧ ಬಂದಾಗ) ಮಂದಿರ -ಆಸರೆಯಾದವನು. (ರಕ್ಷಕನಾದವನು). ನಂದಕ - ಲೋಕಕ್ಕೆ ಆನಂದಪ್ರದ. ದಕ್ಷಶಾಪದಿಂದ ಚಂದ್ರನನ್ನು ರಕ್ಷಣೆ ಮಾಡಿದವನು ರುದ್ರನೆಂದು ಪ್ರಸಿದ್ಧಿಯಿದೆಯಲ್ಲ? ಎಂದರೆ ಅದಕ್ಕೂ ಉತ್ತರ 'ಚಂದ್ರಕಮಂದಿರ' ಎಂದು. ಚಂದ್ರ-ಚಂದ್ರನನ್ನು ಕ - ತಲೆಯಲ್ಲಿ ಹೊತ್ತಿರುವ ಶಿವನಿಗೆ ಕೂಡ, ಮಂದಿರ-ಆಸರೆ ಶ್ರೀಹರಿಯೇ ತಾನೆ? ಅಥವಾ ಚಂದ್ರಕ - ಅಲ್ಪಚಂದ್ರ (ಅಲ್ಪಾರ್ಥದಲ್ಲಿ 'ಕ' ಪ್ರತ್ಯಯ). ಚಂದ್ರಕಲೆಗೆ ತಲೆಯಲ್ಲಿ ಆಶ್ರಯಕೊಟ್ಟು, ಮಂದಿರ-ನೆಲೆಯಾದ ಶಿವನಿಗೆ ನಂದಕ-ಆನಂದಪ್ರದನೇ ಎಂದೂ ಅರ್ಥೈಸಬಹುದು.

ಚಂದ್ರಕ, ಮಂದಿರ, ನಂದಕ ಎಂದು ಬೇರೆ ಬೇರೆ ಪದಗಳಾಗಿ ವಿಂಗಡಿಸಿಯೂ ವ್ಯಾಖ್ಯಾನಿಸಬಹುದು-ಚಂದ್ರ-ಚಂದ್ರನಿಗೆ ಕ - (ಮಾವನಾದ ದಕ್ಷ ಶಾಪವಿಮೋಚನೆಯಿಂದ) ಸುಖವು ಯಾರಿಂದ ಬಂತೋ ಅಂತಹ ಶ್ರೀಹರಿಯೇ! ಮಂದಿರ - ಎಲ್ಲರಿಗೂ ಆಶ್ರಯನೆ ! ನಂದಕ - ಎಲ್ಲರಿಗೂ ಆನಂದಪ್ರದನೆ ! 'ಮಂದಿರನಂದಕ' ಎಂದು ಒಂದೇ ಪದವನ್ನಾಗಿಯೂ ಮಾಡಿ ಅರ್ಥೈಸಬಹುದು. ಮಂದಿರ - ವರುಣನಿಗೆ (ಮಂದಿರೋ ಮಕರಾವಾಸೇ ಇತ್ಯಭಿಧಾನಂ) (ಅಳಿಯನಾಗಿ) ನಂದಕ - ಆನಂದಪ್ರದನೇ !

ಕೆಲವೆಡೆ 'ಚಂದ್ರಸುರೇಂದ್ರಸುವಂದಿತ' ಎಂಬ ಶ್ಲೋಕವು ನಾಲ್ಕನೇ ಶ್ಲೋಕವಾಗಿ ಪಠಿಸಲಾಗಿದೆ.

**ವೃಂದಾರಕವೃಂದ ಸುವಂದಿತ ವಂದೇ।**
**ಆನಂದ . . . . . . ವರದ** ॥ ೫ ॥

ದೇವತೆಗಳ ಸಮೂಹದಿಂದ ಭಕ್ತಿಪೂರ್ವಕವಾಗಿ ವಂದಿತನೆ ! ನಿನಗೆ ವಂದನೆಯು.

**ವಿವರಣೆ:** ವೃಂದಾರವೃಂದ ಸುವಂದಿತ ವಂದೇ। ಹ್ಯ.ಪಾ.

**ಮಂದಾರಸೂನಸುಚರ್ಚಿತ ವಂದೇ।**
**ಆನಂದ . . . . . . ವರದ** ॥ ೬ ॥

ಮಂದಾರ ಪುಷ್ಪಗಳಿಂದ ಚೆನ್ನಾಗಿ ಪೂಜಿಸಲ್ಪಟ್ಟ ಗೋವಿಂದನೇ, ನಿನಗೆ ವಂದನೆಯೂ.

**ವಿವರಣೆ:** ಮಂದಿರಸ್ಯಂದನಸ್ಯಂದಕ ವಂದೇ। ಆನಂದ . . . . . . ವರದ॥ ಹೃ.ಪಾ.ದಲ್ಲಿ

ಕುರುನಗರವನ್ನು, ಅದರಲ್ಲೂ ವಿದುರಗೃಹವನ್ನು ಕುರಿತು ದೌತ್ಯಕ್ಕಾಗಿ ತನ್ನ ರಥವನ್ನು ಹೊರಡಿಸಿದವನೇ ! ನಿನಗೆ ವಂದನೆಯು.

**(ಮಂದಾರಸ್ಯಂದಿತ ಮಂದಿರ ವಂದೇ।**
**ಆನಂದ . . . . . . ವರದ** ॥ ೭ ॥

ಅರಳು ಮಂದಾರ ಕುಸುಮಗಳು ಹರಡಿ ಘಮಘಮಿಸುವ ಮಂದಿರದಿ ನಿವಾಸಿಯೇ ! ನಿನಗೆ ವಂದನೆಯು.

**ವಿವರಣೆ:** ''ಮಂದಾರಃ ಪಾರಿಭದ್ರೇ'' ಎಂಬ ಕೋಶದಂತೆ ಮಂದಾರ ಎಂದರೆ ಪಾರಿಜಾತವೃಕ್ಷ. ಸತ್ಯಭಾಮೆಗಾಗಿ ತನ್ನ ಮನೆಗೆ ಪಾರಿಜಾತವೃಕ್ಷ ತಂದವನು. (ಮಂದಾರಃ ಸ್ವಮಂದಿರಂ ಪ್ರತಿ ಸ್ಯಂದಿತಃ ಆನೀತಃ ಯೇನ ಸಃ) (ಹೃ.ಪಾ.ದಲ್ಲಿ ಇದು ಎಂಟನೇ ಪದ್ಯ.)

**ಇಂದಿರಾನಂದಕ ಸುಂದರ ವಂದೇ।**
**ಆನಂದ . . . ವರದ** ॥ ೭ ॥

ಇಂದಿರೆಯ ಮನದಲ್ಲಿ ಆನಂದವನುಕ್ಕಿಸುವ ಸುಂದರನೆ ! ನಿನಗೆ ವಂದನೆಯು.

**ಮಂದಿರಸ್ಯಂದಿತಸ್ಯಂದಕ ವಂದೇ।**
**ಆನಂದ . . . ವರದ** ॥ ೮ ॥

ನಿನ್ನ ಮಂದಿರದಲ್ಲಿ ಊಳಿಗವ ಮಾಡುತಿಹ ಸುಜನರಿಗೆ ಕರುಣೆ ಸುರಿಸುವವನೆ ! ನಿನಗೆ ವಂದನೆಯು.

**ಆನಂದಚಂದ್ರಿಕಾಸ್ಪಂ(ಸ್ಯಂ)ದಕ ವಂದೇ।**
**ಆನಂದ . . . ವರದ** ॥ ೯ ॥

**॥ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ**
**ದ್ವಾದಶಸ್ತೋತ್ರೇ ದ್ವಾದಶೋಽಧ್ಯಾಯಃ॥**

ಆನಂದವೆಂಬ ಬೆಳದಿಂಗಳನ್ನು ಸುರಿಸುವವನೇ! ನಿನಗೆ ವಂದನೆಯು.

**ಇಲ್ಲಿಗೆ ದ್ವಾದಶಸ್ತೋತ್ರವು ಮುಗಿಯಿತು.**

**ಹೃಷಿಕೇಶತೀರ್ಥರ ಪಾಠದಲ್ಲಿ ಮೂರನೆಯ ಸ್ತೋತ್ರಹೀಗಿದೆ-**

ಶಂಖಚಕ್ರಗದಾಪದ್ಮಶಾರ್ಙ್ಗಖಡ್ಗಧರಂ ಸದಾ।
ನಮಾಮಿ ಪಿತರಂ ನಿತ್ಯಂ ವಾಸುದೇವಂ ಜಗತ್ಪತಿಮ್ ॥೧॥

ಶಂಖಚಕ್ರಗದಾಪದ್ಮಶಾರ್ಙ್ಗಖಡ್ಗಗಳನ್ನು ಸದಾ ಧರಿಸಿರುವ ಜಗದ ಸ್ವಾಮಿಯು, ಪಾಲಕನೂ ಆದ ವಾಸುದೇವನನ್ನು ಸರ್ವದಾ ನಮಿಸುವೆನು.

ಸಚ್ಚಿದಾನಂದರೂಪಂ ತಮನಾಮಯಮನಂತರಮ್।
ಏಕಮೇಕಾಂತಮಭಯಂ ವಿಷ್ಣುಂ ವಿಶ್ವಹೃದಿ ಸ್ಥಿತಮ್ ॥೨॥

ನಿರ್ದುಷ್ಟಗಳಾದ ಜ್ಞಾನಾನಂದಗಳೆ ಮೈವೆತ್ತ ರೂಪದವನು, ದೋಷರಹಿತನು, ಸ್ವಗತಭೇದರಹಿತನು, ಸಮಾಧಿಕರಹಿತನು, ಸರ್ವೋತ್ತಮನು, ಭವಭಯ ಪರಿಹಾರಕನು, ಎಲ್ಲರ ಹೃದಯನಿವಾಸಿಯು ಆದ ವಿಷ್ಣುವನ್ನು ನಮಿಸುವೆನು.

ನಾನಾಸ್ವಭಾವಮತ್ಯಂತಸ್ವಭಾವೇನ ವಿಚಾರಿತಮ್।
ಅವಿಶೇಷಮನಾದ್ಯಂತಂ ಪ್ರಣಮಾಮಿ ಸನಾತನಮ್ ॥೩॥

ನಾನಾ ರೂಪಗಳನ್ನು ಧರಿಸಿ ಎಲ್ಲ ರೂಪಗಳಲ್ಲೂ ಏಕರೂಪನಾಗಿ ವಿರಾಜಿಸುವವನು, ಜ್ಞಾನಿಗಳಿಂದ ಚಿತ್ತೈಕಾಗ್ರತೆಯಿಂದ ವಿಚಾರ ಮಾಡಲ್ಪಡುವವನು, ಮೊದಲು ತುದಿಗಳಿರದವನು, ಶಾಶ್ವತನು ಆದ ವಿಷ್ಣುವನ್ನು ನಮಿಸುವೆನು.

**ವಿವರಣೆ:** ನಾನಾ ಬಗೆಯಾದ, ತನ್ನ ಸ್ವರೂಪಗಳೇ ಆದ ಅವತಾರವುಳ್ಳವನು. ಅನೇಕ ಪ್ರಕಾರಗಳಾದ ಜೀವರನ್ನು ಸೃಷ್ಟಿಮಾಡಿದವನು. ಅತಿಶಯವಾಗಿ ಕೊನೆಯಲ್ಲುಳಿಯುವ ಸರ್ವಜೀವಾಧಿಪತಿಯಾದ ಬ್ರಹ್ಮನಿಂದ ವಿಚಾರ ಮಾಡಲ್ಪಡುವವನು. ಅತ್ಯಂತವಾಗಿ ಭಗವಂತನಲ್ಲಿ ಏಕತಾನ ಸ್ವಭಾವದ ಸಜ್ಜನ ಸಮುದಾಯದಿಂದ ವಿಚಾರಿತನು. ನಾನಾ ಸ್ವಭಾವದ ಮನದ ಕೊನೆಯಾದ ನಿರ್ಣಯಾತ್ಮಕ ಬುದ್ಧಿಯಿಂದ ವಿಚಾರಿಸಲ್ಪಡುವವನು.

ನಾನಾವಿಧಾಃ, ಅಥಾಪಿ ಸ್ವರೂಪಭೂತಾಃ ಭಾವಾಃ ಅವತಾರಾಃ ಯಸ್ಯ। ಯದ್ವಾ ಸ್ವತಂತ್ರಾದ್ ಸ್ವಸ್ಮಾದೇವ ಭಗವತೋ ಭವಂತೀತಿ ಸ್ವಭಾವಾ ಜೀವಾಃ।

''ಭಾವಾಃ ಜೀವಾಃ ಸಮುದ್ದಿಷ್ಟಾಃ ಭವಂತ್ಯೇತೇ ಯತೋ ವಿಭೋಃ'' ಇತಿ ಮಾಂಡೂಕ ಭಾಷ್ಯವಚನಾತ್। ನಾನಾತ್ವೇನೈವ ಪ್ರಮಿತಾಃ ಸ್ವಭಾವಾಃ ಯಸ್ಮಾತ್ ತಮ್। ಅತಿಶಯೇನ ಅಂತೇ ವಿದ್ಯಮಾನಃ ಸ್ವಭಾವಃ ಸರ್ವಜೀವಾಧಿಪತಿರ್ಬ್ರಹ್ಮಾ। ತೇನ ವಿಚಾರಿತಮ್। ಅಥವಾ, ನಾನಾ ಸ್ವಭಾವಾ ಯಾ ಮತಿಃ, ಸಂಕಲ್ಪ-ವಿಕಲ್ಪಾತ್ಮಕಂ। ಮನಃ ಇತಿಯಾವತ್, ತಸ್ಯಾ ಯೋಽಂತಃ ನಿರ್ಣಯಾತ್ಮಕಃ ಸ್ವಭಾವಃ, ವ್ಯವಸಾಯಾತ್ಮಿಕಾ ಬುದ್ಧಿಃ ಇತಿ ಯಾವತ್, ತೇನ ವಿಚಾರಿತಮ್।

ಕುಂದೇಂದುಸನ್ನಿಭಂ ವಂದೇ ಸುಧಾರಸನಿಭಂ ವಿಭುಮ್।
ಜ್ಞಾನ ಮುದ್ರಾಪುಸ್ತಕಾರಿ(ದಿ) ಶಂಖಾಕ್ಷಾಯುಧಧಾರಿಣಮ್ ॥ ೪ ॥

ಕುಂದಕುಸುಮದಂತೆ ಸುಂದರನು, ಚಂದಿರನಂತೆ ಚೆಂದದವನು, ಜ್ಞಾನಮುದ್ರೆ, ಪುಸ್ತಕ, ಚಕ್ರ, ಶಂಖ, ಅಕ್ಷಮಾಲೆ ಹಾಗೂ ಆಯುಧಗಳನ್ನು ಧರಿಸಿರುವ ವಿಭುವನ್ನು ನಮಿಸುವೆನು.

ಆನಂದಮಜರಂ ನಿತ್ಯಮಾತ್ಮೇಶಮಮಿತದ್ಯುತಿಮ್।
ವಂದೇ ವಿಶ್ವಸ್ಯ ಪಿತರಂ ವಿಷ್ಣುಂ ವಿಶ್ವೇಶ್ವರಂ ಸದಾ ॥ ೫ ॥

ಆನಂದರೂಪನು, ಮುಪ್ಪು ಸಾವಿರದವನು, ಎಲ್ಲರಂತರ್ಯಾಮಿಯು, ಸ್ವಾಮಿಯು, ಎಣೆಯಿರದ ಕಾಂತಿಯುವನು, ವಾಯುದೇವನ ತಂದೆಯು, ಜಗದೊಡೆಯ, ಎಲ್ಲೆಡೆಯು ತುಂಬಿರುವ ಶ್ರೀಹರಿಯನ್ನು ಸದಾ ನಮಿಸುವೆನು.

ಅಮಂದಾನಂದಸಂದೋಹ ಸಂತೋಷಿತಜಗತ್ತ್ರಯಮ್।
ನಾರಾಯಣಮಣೀಯಾಂಸಂ ವಂದೇ ದೇವಂ ಸದಾತನಮ್ ॥ ೬ ॥

ತುಂಬಿ ತುಳುಕುವ ಸಂತಸದ ಸೆಲೆಯಿಂದ ಮೂರ್ಜಗವ ಸಂತೋಷಪಡಿಸುವವನು, ಅಣುವಿಗಿಂತಣುವು, ಸೃಷ್ಟ್ಯಾದಿ ಕ್ರೀಡಾರೂಪನು, ನಿತ್ಯನು ಆದ, ನಾರಾಯಣನನ್ನು ನಮಿಸುವೆನು.

ಸೂರ್ಯಮಂಡಲಮಧ್ಯಸ್ಥಂ ವರಾಭಯಕರೋದ್ಯತಮ್।
ಸೂರ್ಯಾಮಿತದ್ಯುತಿಂ ವಂದೇ ನಾರಾಯಣಮನಾಮಯಮ್ ॥ ೭ ॥

ಸೂರ್ಯಮಂಡಲದ ನಡುವೆ ಇರುವವನು, ವರ, ಅಭಯ ಮುದ್ರೆಗಳುಳ್ಳ

ಕೈಗಳಿಂದ ಅನುಗ್ರಹೋನ್ಮುಖನಾದವನು, ಸೂರ್ಯನಿಗಿಂತಲೂ ಅಧಿಕ ಕಾಂತಿಯವನು ಹಾಗೂ ಪಾಪಪರಿಹಾರಕನೂ ಆದ ನಾರಾಯಣನನ್ನು ನಮಿಸುವೆನು.

ವಿಶ್ವಂ ವಿಶ್ವಾಕರಂ ವಂದೇ ವಿಶ್ವಸ್ಯ ಪ್ರಪಿತಾಮಹಮ್।
ನಾನಾರೂಪಮಜಂ ನಿತ್ಯಂ ವಿಶ್ವಾತ್ಮಾನಂ ಪ್ರಜಾಪತಿಮ್ ॥ ೮ ॥

ಎಲ್ಲೆಡೆಯು ತುಂಬಿರುವವನು, ಎಲ್ಲದಕು ನೆಲೆಯಾದವನು, ಎಲ್ಲಾ ಲೋಕಗಳ ಪ್ರಪಿತಾಮಹನು. ಪಿತಾಮಹನೆನಿಸಿದ ಬ್ರಹ್ಮನ ತಂದೆಯು, ಬಹೂರೂಪವುಳ್ಳವನು, ಹುಟ್ಟು ಸಾವಿರದವನು, ವಿಶ್ವಾಂತರ್ಯಾಮಿಯು, ಪ್ರಜಾಪಾಲಕನು ಆದ ನಾರಾಯಣನನ್ನು ನಮಿಸುವೆನು.

ವಿವರಣೆ: ವಿಶ್ವಾಕಾರಂ- ವಿಶ್ವಸ್ಯ ಆಕರಃ ಇವಾಕರಃ ಆಶ್ರಯಃ ಇತಿ ಯಾವತ್. ಆಕರಃ ಇತಿ ಆಕಾರಣಾ ವಾ। ವಿಶ್ವ ಇತ್ಯಾಕ್ರಿಯತೇ ಯತಃ। ವಿಶ್ವನಾಮ ಇತಿ ಯಾವತ್। ವಿಶ್ವಾಕಾರಂ ವಾ। ''ಸ ಭೂಮಿಂ ವಿಶ್ವತೋ ವೃತ್ವಾ'' ಇತಿ ಹಿ ಶ್ರೂಯತೇ। ಸರ್ವತ್ರ ಪ್ರವೇಶನಾತ್ ವಿಶ್ವಪದೋದಿತಮಪ್ಯಾತ್ಮಾನಂ। ವಿಶ್ವಂ ಜಗದಭಿನ್ನಸ್ವರೂಪಂ ನ ಕರೋತೀತಿ ವಾ। ಅತ ಏವೋಪರಿಷ್ಟಾತ್ ವಕ್ಷ್ಯತಿ 'ವಿಶ್ವಾತ್ಮಾನಮಿತಿ. ವಿಶ್ವಾಂತರ್ಯಾಮಿಣಮ್, ವಿಶ್ವಸ್ವಾಮಿನಮ್.

ಎಲ್ಲದಕ್ಕೂ ಗಣಿಯಂತೆ ಆಶ್ರಯನು. 'ವಿಶ್ವ' ಎಂಬ ನಾಮವುಳ್ಳವನು. ವಿಶ್ವಾಕಾರನು. ಎಲ್ಲೆಡೆ ತುಂಬಿರುವುದರಿಂದ ವಿಶ್ವ ಎಂದೆನಿಸಿದರೂ ತನ್ನನ್ನು ವಿಶ್ವದಿಂದ ಅಭಿನ್ನನಾಗಿಸಿಕೊಳ್ಳದವನು. ಆದ್ದರಿಂದಲೇ ವಿಶ್ವಾತ್ಮ - ವಿಶ್ವಾಂತರ್ಯಾಮಿ. ವಿಶ್ವಸ್ವಾಮಿ.

ಕಾಲಾಕಾಲ ವಿಚಾರಾದಿ ಪ್ರಕಾಲಿತ ಸದಾತನಮ್।
ಪುರುಷಂ ಪ್ರಕೃತಿಸ್ಥಂ ಚ ವಂದೇ ವಿಷ್ಣುಮಜೋತ್ತಮಮ್ ॥ ೯ ॥

ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳಿಗೆ ಕಾರಣ ಯಾರೆಂಬ ಮೀಮಾಂಸೆಯ ಮೂಲಕ ಬ್ರಹ್ಮಸೂತ್ರಗಳಿಂದ ತಿಳಿಸಲ್ಪಟ್ಟ ಪುರಾತನ ಪುರುಷನು, ವೇದಪ್ರತಿಪಾದ್ಯನು, ಗುಣಪರಿಪೂರ್ಣನು, ಪ್ರಕೃತಿಯಲ್ಲಿ ನಿಯಾಮಕನಾಗಿರುವವನು, ಜೀವೋತ್ತಮನಾದ ಬ್ರಹ್ಮನಿಗಿಂತಲೂ ಸರ್ವೋತ್ತಮನೂ ಆದ ವಿಷ್ಣುವನ್ನು ವಂದಿಸುವೆನು.

ವಿವರಣೆ: ಕಾಲಾಕಾಲವಿಚಾರಾದಿಪ್ರಕಾಲಿತಸದಾತನಮ್- ಜಗತ್ಕಾಲನಾತ್ ಕಾಲೋ ಭಗವಾನಿತಿ ಸಂಹರ್ತೃತ್ವ ವಿಚಾರಃ ಕಾಲವಿಚಾರಃ. ಅಕಾಲ ಇತಿ ಸಂಹಾರ

ವಿರುದ್ಧಾ ಸೃಷ್ಟಿರುಚ್ಯತೇ. ತದ್ಯಥಾ ಶ್ರುತೌ ಅಸಂಭೂತಿರಿತಿ ಸಂಹಾರ ಉಚ್ಯತೇ। ತಥಾಚಾಕಾಲವಿಚಾರ ಇತಿ ಸ್ರಷ್ಟೃತ್ವವಿಚಾರಃ. ಆದಿಪದೇನ ಸ್ಥಿತಿ ನಿಯತಿ ಜ್ಞಾನಾಜ್ಞಾನಬಂಧಮೋಕ್ಷವಿಚಾರಃ। ತಥಾ ಚ ಸೃಷ್ಟ್ಯಾದ್ಯಷ್ಟಕ ಕರ್ತೃತ್ವ ವಿಚಾರ ರೂಪಯಾ ಮೀಮಾಂಸಯಾ ಬ್ರಹ್ಮಸೂತ್ರಾದಿಭಿಃ ಪ್ರಕಾಲಿತಃ ಪ್ರಜ್ಞಾಪಿತಃ ಸದಾತನೋ ಭಗವಾನ್। ''ಕಲ ಸಂಖ್ಯಾನೇ''। ''ಯೇಽಸಂಭೂತಿಮುಪಾಸತೇ। ತತೋ ಭೂಯ ಇವ ತೇ ತಮೋ ಯ ಉ ಸಂಭೂತ್ಯಾಂ ರತಾಃ'' ಇತಿ। ''ಸಂಭೂತಿಂ ಚ ವಿನಾಶಂ ಚ ಯಸ್ತದ್ವೇದೋಭಯಂ ಸಹ। ವಿನಾಶೇನ ಮೃತ್ಯುಂ ತೀರ್ತ್ವಾ ಸಂಭೂತ್ಯಾಽಮೃತಮಶ್ನುತೇ'' ಇತಿ ಚ। (ಬ.ಗೋ.).

ಜಗತ್ತನ್ನು ಸಂಹಾರಗೊಳಿಸುವುದರಿಂದ 'ಕಾಲ' ಎಂದರೆ ಭಗವಂತ. 'ಕಾಲ ವಿಚಾರ' ಎಂದರೆ ಸಂಹರ್ತೃತ್ವದ ವಿಚಾರ. ಅಕಾಲ ಎಂದರೆ ಸಂಹಾರಕ್ಕೆ ವಿರುದ್ಧವಾದ ಸೃಷ್ಟಿ. ಅಕಾಲ ವಿಚಾರ ಎಂದರೆ ಸೃಷ್ಟಿಕರ್ತೃತ್ವ ವಿಚಾರ. ಆದಿಪದದಿಂದ ಸ್ಥಿತಿ ಮುಂತಾದವುಗಳ ವಿಚಾರವನ್ನು ತೆಗೆದುಕೊಳ್ಳಬೇಕು. ಸೃಷ್ಟ್ಯಾದಿ ಕರ್ತೃತ್ವಗಳ ವಿಚಾರ ರೂಪವಾದ ಮೀಮಾಂಸೆಯ ಮೂಲಕ ಬ್ರಹ್ಮಸೂತ್ರಗಳಿಂದ ತಿಳಿಸಲ್ಪಟ್ಟವನು.

ಬ್ರಹ್ಮಣಃ ಪಿತರಂ ವಂದೇ ಶಂಕರಸ್ಯ ಪಿತಾಮಹಮ್।
ಶ್ರಿಯಃ ಪತಿಮಜಂ ನಿತ್ಯಮಿಂದ್ರಾದಿಪ್ರಪಿತಾಮಹಮ್ ॥ ೧೦ ॥

ಜಗತ್ಸ್ರಷ್ಟಾರನಾದ ನಾಲ್ಮೊಗನಯ್ಯನು. ಜಗವ ಸಂಹರಿಸುವ ಶಂಕರನ ಅಜ್ಜನು. ಇಂದ್ರಾದಿ ಸುರರಿಗೆಲ್ಲ ಮುತ್ತಜ್ಜನು. ರಮೆಯ ಪತಿಯು. ಉತ್ಪತ್ತಿ ನಾಶವಿರದವನೂ ಆದ ದೇವನನ್ನು ನಮಿಸುವೆನು.

ಪ್ರತಿಪ್ರತಿ ಸ್ಥಿತಂ ವಿಷ್ಣುಂ ನಿತ್ಯಾಮೃತಮನಾಮಯಮ್।
ಶಂಖಚಕ್ರಧರಂ ವಂದೇ ವರಾಭಯಕರೋದ್ಯತಮ್ ॥ ೧೧ ॥

ಪ್ರತಿಯೊಂದು ವಸ್ತುಗಳ ಒಳಗೂ ನಿಯಾಮಕನಾಗಿ ನೆಲೆಸಿಹ, ನಿತ್ಯಮುಕ್ತನು, ದೋಷರಹಿತನು, ಶಂಖಚಕ್ರಧಾರಿಯು, ವರ-ಅಭಯಮುದ್ರೆ ಯುಳ್ಳ ಕೈಗಳಿಂದ ಅನುಗ್ರಹಿಸಲು ಉದ್ಯುಕ್ತನು ಆಗಿರುವ ವಿಷ್ಣುವನ್ನು ನಮಿಸುವೆನು.

ಪ್ರತಾಪಪ್ರವಿಶೇಷೇಣ ದೂರೀಕೃತವಿದೂಷಣಮ್।
ವಿದಾರಿತಾರಮತ್ಯಂತಪ್ರಸನ್ನಂ ಪ್ರಣಮಾಮ್ಯಹಮ್ ॥ ೧೨ ॥

ತನ್ನ ಅಪರಿಮಿತ ಪ್ರತಾಪದಿಂದ ಎಲ್ಲಾ ದೋಷಗಳನ್ನು ನಿರ್ಮೂಲನಗೊಳಿಸಿಕೊಂಡಿಹ, ಅರಿಗಳನ್ನು ತರಿವ, ಅತ್ಯಂತ ಪ್ರಸನ್ನನಾದ ಶ್ರೀಹರಿಯನ್ನು ನಾನು ನಮಿಪೆನು.

ಅಪ್ರಮೇಯಮಜಂ ನಿತ್ಯಂ ವಿಶಾಲಮಮೃತಂ ಪರಮ್
ಕೃತನಿತ್ಯಾಲಯಂ ಲೋಕೇ ನಮಸ್ಯಾಮಿ ಜಗತ್ಪತಿಮ್ ॥ ೧೩ ॥

ಅರಿವಿಗೆಟುಕದವ, ಹುಟ್ಟು ಸಾವಿರದವ, ಎಲ್ಲೆಡೆಯು ನೆಲೆಸಿಹ, ನಿತ್ಯಮುಕ್ತನು, ಪರಮನೂ ಆಗಿಹ, ಎಲ್ಲಾ ಲೋಕಗಳಲ್ಲೂ ನಿತ್ಯದಲ್ಲೂ ನೆಲೆಸಿಹ ಜಗತ್ಪತಿಯನ್ನು ನಮಿಸುವೆನು.

ಸುನಿತ್ಯಸುಖಮಕ್ಷಯ್ಯಂ ಶುದ್ಧಂ ಶಾಂತಂ ನಿರಂಜನಮ್।
ಲೋಕಾಲೋಕವಿಚಾರಾಢ್ಯಂ ನಮಸ್ಯಾಮಿ ಶ್ರಿಯಃ ಪತಿಮ್ ॥ ೧೪ ॥

ನಿತ್ಯದಲ್ಲೂ ಸುಖರೂಪನಾಗಿಹ, ಎಂದೆಂದು ನಾಶವಿರದ, ಶುದ್ಧನು, ಶಾಂತನು, ನಿರ್ದೋಷನು, ಅಮುಕ್ತರು ಹಾಗೂ ಮುಕ್ತರ ನಿರಂತರ ಚಿಂತನೆಗೆ ವಿಷಯನೂ ಆದ ಶ್ರೀಪತಿಯನ್ನು ನಮಿಸುವೆನು.

**ವಿವರಣೆ:** ಲೋಕಾಲೋಕವಿಚಾರಾಢ್ಯಂ- ಲೋಕ್ಯಂತೇ ಇತ್ಯಮುಕ್ತಾಃ ಲೋಕಾಃ। ಮುಕ್ತಾಃ ಅಲೋಕಾಃ। ತೇಷಾಮುಭಯೇಷಾಂ ನಿರಂತರ-ಜಿಜ್ಞಾಸಯಾಢ್ಯಮ್. ''ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ'' ಇತಿ ಹ್ಯುಕ್ತಮ್।

ಲೋಕ-ಕಣ್ಣಿಗೆ ಗೋಚರವಾಗುವ ಅಮುಕ್ತರು. ಅಲೋಕ-ಕಣ್ಣಿಗೆ ಕಾಣದ ಮುಕ್ತರು. ಅವರ ವಿಚಾರಕ್ಕೆ ವಿಷಯನಾದವನು.

ಅಮಂದಾನಂದಸಂದೋಹಸಾಂದ್ರಮಿಂದ್ರಾನುಜಂ ಪರಮ್।
ನಿತ್ಯಾವದಾತಮೇಕಾಂತಂ ಪ್ರಮಾಣಾತೀತಮಕ್ಷಯಮ್।
ಲೋಕಾಲೋಕಪತಿಂ ದಿವ್ಯಂ ನಮಸ್ಯಾಮಿ ರಮಾಪತಿಮ್ ॥ ೧೫ ॥

ದಟ್ಟೈಸಿರುವ ಸಂತಸದ ಸಮೂಹದಿಂದ ತುಂಬಿರುವ, ಇಂದ್ರಾನುಜನು, ಸರ್ವೋತ್ತಮನು, ನಿತ್ಯನಿರ್ಮಲನು, ಪ್ರಮಾಣಗಳಿಗೂ ಮೀರಿದವ, ನಾಶವಿಲ್ಲದವ, ಎಲ್ಲಾ ಲೋಕಗಳೊಡೆಯ, ಕ್ರೀಡಾರೂಪನೂ ಆದ ರಮಾಪತಿಯನ್ನು ನಮಿಸುವೆನು.

## ಪರಿಶಿಷ್ಟ

ಶ್ರೀ ಮಧ್ವಾಚಾರ್ಯರು ತನ್ನ ಆರಾಧ್ಯಮೂರ್ತಿಯಾದ ಶ್ರೀಕೃಷ್ಣನು ಮಲ್ಪೆಯ ಸಮುದ್ರದೆಡೆ ಆಗಮಿಸಿರುವ ವಿಷಯವನ್ನು ತಮ್ಮ ಧ್ಯಾನದೃಷ್ಟಿಯಿಂದ ತಿಳಿದು ಅವನನ್ನು ಈ ಸ್ತೋತ್ರಗಳಿಂದ ಹಾಡುತ್ತ ಕುಳಿತರು. ಕೃಷ್ಣಮೂರ್ತಿಯನ್ನು ಕಂಡು ಆನಂದೋದ್ರೇಕಗೊಂಡ ಆಚಾರ್ಯರು ''ದೇವಕಿನಂದನ ನಂದಕುಮಾರ'' ಎಂಬ ಪದ್ಯದಿಂದ ಭಗವಂತನನ್ನು ಕೊಂಡಾಡಿದರು. ಕೃಷ್ಣನನ್ನು ಹೊತ್ತು ಉಡುಪಿಯವರೆಗೆ ಬರುತ್ತ ಹಾಡಿದರು. ಭಕ್ತಿ ರಸಪೂರ್ಣ ಸಂಗೀತದ ಹಿನ್ನೆಲೆಯಲ್ಲಿ ಮೈಮರೆತು ಕುಣಿದು ಹಾಡಬೇಕಾದ ಹಾಡುಗಬ್ಬವಿದು.

ಶ್ರೀ ಮಧ್ವಾಚಾರ್ಯರು ಪಾಠ ಮಾಡುತ್ತಿದ್ದಾಗ ಎತ್ತಿನ ರೂಪದಲ್ಲಿ ಶ್ರವಣ ಮಾಡುತ್ತ ಕುಳಿತ ಶ್ರೀಜಯತೀರ್ಥರು ತಮ್ಮ ಗ್ರಂಥಗಳಿಗೆ ಮುಂದೆ ವ್ಯಾಖ್ಯಾನಿಸುವರೆಂದು ಆಚಾರ್ಯರು ಹೇಳಿದ್ದನ್ನು ಕೇಳಿ ಅಸಹನೆಯಿಂದ ಶಿಷ್ಯರು ವಿಷ ಪ್ರಯೋಗಿಸಿದರು. ವಿಷದಿಂದ ವಿಷಣ್ಣವಾದ ಎತ್ತನ್ನು ಅದರ ಕಿವಿಯಲ್ಲಿ ದ್ವಾದಶಸ್ತೋತ್ರವನ್ನು ಪಠಿಸಿ ಶ್ರೀಆಚಾರ್ಯರು ಉಜ್ಜೀವನಗೊಳಿಸಿದರು ಎಂದು ಐತಿಹ್ಯವಿದೆ. ಈ ಹಿನ್ನೆಲೆಯಲ್ಲಿ ದೇವರ ನೈವೇದ್ಯ ಕಾಲದಲ್ಲಿ ಆಹಾರದಲ್ಲಿ ಸಂಭವನೀಯ ವಿಷದ ಪರಿಹಾರಕ್ಕಾಗಿ ದ್ವಾದಶಸ್ತೋತ್ರವನ್ನು ಪಠಿಸುವ ಸಂಪ್ರದಾಯವೂ ಬಂದಿದೆ.

ಶ್ರೀ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀ ಹೃಷಿಕೇಶತೀರ್ಥರು ಬರೆದ ಸರ್ವಮೂಲದ ಹಸ್ತಪ್ರತಿಯಲ್ಲಿ ದ್ವಾದಶಸ್ತೋತ್ರದ ಪಾಠ ಬೇರೆ ತೆರನಾಗಿದೆ. ಆಚಾರ್ಯರ ಸಾಕ್ಷಾತ್ ಶಿಷ್ಯರು ಬರೆದಿಟ್ಟ ಈ ಪಾಠವು ಅಧಿಕೃತವಾದ ಪಾಠ. ಆದರೆ ಪರಂಪರೆಯಲ್ಲಿ ಇದು ಬಳಕೆಯಲ್ಲಿರದೆ ಬೇರೆ ಪಾಠವೆ ಬೆಳೆದು ಬಂದಿದೆ. ಕೆಲವು ಪ್ರಾಚೀನ ವ್ಯಾಖ್ಯಾನಕಾರರೂ ಈ ಪ್ರಚಲಿತ ಪಾಠವನ್ನೇ ಹಿಡಿದು ವ್ಯಾಖ್ಯಾನಿಸಿರುವರು. ಅದಕ್ಕೆ ಅನುಗುಣವಾಗಿ ಪ್ರಚಲಿತ ಪಾಠವನ್ನೇ ಇಲ್ಲಿ ಅನುವಾದಿಸಲಾಗಿದೆ. ಆದರೂ ವಿದ್ಯಾವಾಚಸ್ಪತಿ ಶ್ರೀ ಬನ್ನಂಜೆ ಗೋವಿಂದಾಚಾರ್ಯರ ಸಂಶೋಧನೆಯ ಫಲವಾಗಿ ಹೊಸ ಪಾಠ ದೊರೆತಿರುವುದರಿಂದ ಪ್ರಚಲಿತ ಪಾಠ ಹಾಗೂ ಈ ಪಾಠಗಳ ವ್ಯತ್ಯಾಸ ಅವಶ್ಯ ತಿಳಿಯಬೇಕೆಂಬ ಕಾರಣದಿಂದ ಅದನ್ನೂ ಅಲ್ಲಲ್ಲಿ ತಿಳಿಸಲಾಗಿದೆ.

ಪ್ರಚಲಿತ ಪಾಠದಲ್ಲಿ ಒಂದೊಂದು ಸ್ತೋತ್ರವನ್ನು ಒಂದೊಂದು ಅಧ್ಯಾಯಗಳನ್ನಾಗಿ ಸಮೂದಿಸಲಾಗಿದೆ. ಹೃಷೀಕೇಶತೀರ್ಥರ ಪಾಠದಲ್ಲಿ ಪ್ರತ್ಯೇಕ

ಸ್ತೋತ್ರಗಳೆಂದು ಪರಿಗಣಿಸಲಾಗಿದೆ. ಸ್ತೋತ್ರಗಳ ಕ್ರಮದಲ್ಲಿಯೂ ವ್ಯತ್ಯಾಸವಿದೆ. ಪ್ರಚಲಿತ ಪಾಠದ ಏಳನೆ ಸ್ತೋತ್ರವನ್ನು 'ಶ್ರೀಸ್ತುತಿ' ಎಂದು ಹೆಸರಿಸಿ ಮೊದಲ ಸ್ತೋತ್ರವನ್ನಾಗಿ ಪರಿಗ್ರಹಿಸಿದೆ. ಒಂದು ಸ್ತೋತ್ರ ಅಧಿಕವಾಗಿದೆ. ಇದರ ಅನುವಾದವನ್ನೂ ಕೊನೆಯಲ್ಲಿ ಕೊಡಲಾಗಿದೆ. ಇರುವ ಸ್ತೋತ್ರಗಳಲ್ಲಿಯೂ ಪ್ರಚಲಿತ ಪಾಠಕ್ಕೆ ಭಿನ್ನವಾಗಿ ಕೆಲವು ಪದ, ಪದ್ಯಗಳ ವ್ಯತ್ಯಾಸವಿದೆ. ಪ್ರಚಲಿತ ಪಾಠದ ಮೂರು ಮತ್ತು ನಾಲ್ಕನೇ ಅಧ್ಯಾಯಗಳನ್ನು ಒಂದುಗೂಡಿಸಿ ಐದನೆ ಸ್ತೋತ್ರವೆಂದು ಪರಿಗಣಿಸಿದೆ.

### ಅನುವಾದದಲ್ಲಿ ಬಳಸಿಕೊಂಡ ಗ್ರಂಥಗಳು -

೧. ಶ್ರೀವಿಶ್ವಪತಿ ತೀರ್ಥರ ಟೀಕೆ,

೨. ವಕೀಲ ಸಿ.ಎಂ. ಪದ್ಮನಾಭಾಚಾರ್ಯರ ಸಂಸ್ಕೃತ ವ್ಯಾಖ್ಯಾನ,

೩. ಅಖಿಲಭಾರತ ಮಾಧ್ವ ಮಹಾಮಂಡಲದ ಪ್ರಕಾಶನವಾದ ಸರ್ವಮೂಲದ ''ಸಂಕೀರ್ಣಗ್ರಂಥಾಃ'' ಎಂಬ ಐದನೆ ಸಂಪುಟದಲ್ಲಿ ದ್ವಾದಶಸ್ತೋತ್ರದ ಭಾಗ.
ಸಂಪಾದಕರು - ಶ್ರೀ ಬನ್ನಂಜೆ ಗೋವಿಂದಾಚಾರ್ಯರು.

೪. ಕರ್ನಾಟಕ ತಾತ್ಪರ್ಯ ಸಹಿತ ದ್ವಾದಶಸ್ತೋತ್ರ.
ಅನುವಾದ: ಶ್ರೀ ಬಿ. ಶ್ರೀನಿವಾಸಭಟ್ಟ.
ಪ್ರಕಾಶನ- ಶ್ರೀಮನ್ಮಧ್ವ ಸಿದ್ಧಾಂತ ಗ್ರಂಥಾಲಯ.

೫. ಶ್ರೀ ದ್ವಾದಶಸ್ತೋತ್ರಮ್ ಕನ್ನಡಟೀಕಾ ಸಹಿತ - ಕೆ. ನರಸಿಂಹಾಚಾರ್ಯ.

೬. ಶ್ರೀ ಗಂಗೋದಮಿಶ್ರಕೃತ ಸಂಸ್ಕೃತ ವ್ಯಾಖ್ಯಾ.

---

ಶ್ರೀಮದಾನಂದತೀರ್ಥ ಭಗವತ್ಪಾದರು ರಚಿಸಿದ

# ಶ್ರೀ ಸರ್ವಮೂಲ ಗ್ರಂಥಗಳು

(ಕನ್ನಡ ಅನುವಾದ ವಿವರಣೆ ಸಹಿತ)

## ನರಸಿಂಹನಖಸ್ತುತಿ

ಅನುವಾದ :

ವಿದ್ವಾನ್ ಎ. ಹರಿದಾಸಭಟ್ಟ ಎಂ. ಎ.

ಜಯತ್ಯಾನಂದತೀರ್ಥೇಷ್ಟದೇವತಾ ನರಕೇಸರೀ।
ವಿಪಾಟಿತಾಜ್ಞಾನತಮಃಕಪಾಟಾತ್ಕುರುಹುಂಕೃತಿಃ॥

ತತ್ತ್ವೋದ್ಯೋತ ಪ್ರಕರಣದ ಕೊನೆಯಲ್ಲಿರುವ ಈ ಶ್ಲೋಕ ಆನಂದತೀರ್ಥರ ಇಷ್ಟದೇವತೆ ಶ್ರೀನರಸಿಂಹನೆಂದು ತಿಳಿಸುತ್ತಿದೆ.

||ಶ್ರೀಃ||

## ಶ್ರೀಮದಾನಂದತೀರ್ಥ ಭಗವತ್ಪಾದರು ರಚಿಸಿದ

# ಶ್ರೀ ನರಸಿಂಹ ನಖಸ್ತುತಿ

। ಹರಿಃ ಓಂ ।

ಪಾಂತ್ವಸ್ಮಾನ್ ಪುರುಹೂತ-ವೈರಿ-ಬಲವನ್-ಮಾತಂಗ-ಮಾದ್ಯದ್-ಘಟಾ-
ಕುಂಭೋಚ್ಚಾದ್ರಿ-ವಿಪಾಟನಾಧಿಕಪಟು-ಪ್ರತ್ಯೇಕ-ವಜ್ರಾಯಿತಾಃ।
ಶ್ರೀಮತ್-ಕಂಠೀರವಾಸ್ಯ-ಪ್ರತತ-ಸುನಖರಾ-ದಾರಿತಾರಾತಿ-ದೂರ-
ಪ್ರಧ್ವಸ್ತ-ಧ್ವಾಂತ-ಶಾಂತ-ಪ್ರವಿತತ-ಮನಸಾ ಭಾವಿತಾ ಭೂರಿಭಾಗ್ಯೈಃ ||೧||

**ಅನ್ವಯಾರ್ಥ**-ಪುರುಹೂತವೈರಿ-ಬಲವನ್‌ಮಾತಂಗ-ಮಾದ್ಯದ್‌ಘಟಾ-ಕುಂಭ - ಉಚ್ಚಾದ್ರಿ - ವಿಪಾಟನ - ಅಧಿಕಪಟು - ಪ್ರತ್ಯೇಕ - ವಜ್ರಾಯಿತಾಃ, ಪುರುಹೂತ=ದೇವೇಂದ್ರನ ವೈರಿ=ಶತ್ರುಗಳೆಂಬ, ಬಲವತ್=ಶಕ್ತಿಶಾಲಿಗಳಾದ ಮಾತಂಗ=ಆನೆಗಳ ಮಾದ್ಯತ್=ಮದವೇರಿದ ಘಟಾ=ಹಿಂಡಿನ ಕುಂಭ=ಗಂಡಸ್ಥಲವೆಂಬ ಉಚ್ಚಾದ್ರಿ=ಎತ್ತರದ ಬೆಟ್ಟವನ್ನು ವಿಪಾಟನ=ಸೀಳುವ ಕಾರ್ಯದಲ್ಲಿ ಅಧಿಕಪಟು=ಅತ್ಯಂತ ಜಾಣ್ಮೆಯುಳ್ಳ ಪ್ರತ್ಯೇಕ=ಒಂದೊಂದಾಗಿಯೇ ವಜ್ರಾಯಿತಾಃ=ವಜ್ರಾಯುಧದಂತಿರುವ,

ದಾರಿತ ಅರಾತಿ-ದೂರ ಪ್ರಧ್ವಸ್ತ ಧ್ವಾಂತ-ಶಾಂತ ಪ್ರವಿತತಮನಸಾ, ದಾರಿತ=ಸಂಹರಿಸಲ್ಪಟ್ಟ ಅರಾತಿ=ಬಾಹ್ಯ ಶತ್ರುಗಳು ಹಾಗೂ ದೂರ=ದೂರಕ್ಕೆ ಪ್ರಧ್ವಸ್ತ=ನಿರಾಸ ಮಾಡಲ್ಪಟ್ಟ ಧ್ವಾಂತ=ಅಜ್ಞಾನವೆಂಬ ಕತ್ತಲೆ ಇವುಗಳಿಂದ ಶಾಂತ=ನಿರಾಳವಾದ ಪ್ರವಿತತ=ವಿಸ್ತಾರವಾದ ಮನಸಾ=ಮನಸ್ಸಿನಿಂದ ಭೂರಿಭಾಗ್ಯೈಃ=ಭಾಗ್ಯಶಾಲಿಗಳಿಂದ ಭಾವಿತಾಃ=ಧ್ಯಾನಿಸಲ್ಪಟ್ಟ,

ಶ್ರೀಮತ್‌ಕಂಠೀರವಾಸ್ಯಪ್ರತತಸುನಖರಾಃ, ಶ್ರೀಮತ್=ತೇಜಃಪೂರ್ಣವಾದ ಕಂಠೀರವಾಸ್ಯ=ಸಿಂಹದ ಮುಖವುಳ್ಳ ನರಸಿಂಹದೇವನ ಪ್ರತತ=ಉದ್ದನೆಯ ಸುನಖರಾಃ=ಆಕರ್ಷಕ ಉಗುರುಗಳು ಅಸ್ಮಾನ್=ನಮ್ಮನ್ನು ಪಾಂತು=ರಕ್ಷಿಸಲಿ.

**ಭಾವಾರ್ಥ**-ಯಾವ ಆಯುಧಗಳೂ ನಾಟದ ಹಿರಣ್ಯಾಕ್ಷನನ್ನು ಬಗಿದ ಬಲಿಷ್ಠ ಉಗುರುಗಳು ನರಸಿಂಹದೇವನದು. ಭಗವಂತನ ನಖಶಿಖಾಂತ ಅವಯವಗಳು ಸ್ವರ್ಣಮಯ -'ಆ ಪ್ರಣಖಾತ್ ಸರ್ವ ಏವ ಸುವರ್ಣಃ' (ಪ್ರ.ಉ.) ಕೊಬ್ಬಿದ ಆನೆಗಳ ಮೇಲೆ ಹಾರಿ ಕೈಉಗುರುಗಳಿಂದಲೇ ಅವುಗಳ ತಲೆಯನ್ನು ಬಗೆಯುವುದು ಸಿಂಹಗಳ ಸಾಹಸ. ದೇವೇಂದ್ರನ ಶತ್ರುಗಳಾದ ದೈತ್ಯರೇ ಇಂತಹ ಕೊಬ್ಬಿದ ಆನೆಗಳ ಹಿಂಡು. ಅವುಗಳ ಗಂಡಸ್ಥಳವೆಂಬ ಬೆಟ್ಟಕ್ಕೆ ನರಸಿಂಹದೇವನ ಒಂದೊಂದು ಉಗುರೂ ವಜ್ರಾಯುಧ. ಇಂದ್ರನ ವಜ್ರಾಯುಧ ಬೆಟ್ಟಗಳ ರೆಕ್ಕೆಗಳನ್ನು ಕತ್ತರಿಸಿದರೆ, ಈ ಉಗುರು ಬೆಟ್ಟಗಳನ್ನು ತರಿದು ಪುಡಿಗಟ್ಟುತ್ತದೆ. ಮಹಾತ್ಮರು ತಮ್ಮ ಬಾಹ್ಯ ಶತ್ರುಗಳನ್ನೂ ಕಾಮಾದಿ ಆಂತರ ಶತ್ರುಗಳನ್ನೂ ಸದೆಬಡಿದು ಪ್ರಶಾಂತ ಮನಸ್ಸಿನಿಂದ ಇಂತಹ ಉಗುರುಗಳನ್ನು ಧ್ಯಾನಿಸುತ್ತಾರೆ. ಅದು ದುಷ್ಟ ಹಿರಣ್ಯಕನನ್ನು ತರಿದರೂ ಪ್ರಹ್ಲಾದನನ್ನು ಬಾಚಿ ತಬ್ಬಿತು. ಅಂತಹ ಉಗುರುಗಳು ನಮ್ಮನ್ನು ಕಾಪಾಡಲಿ.

**ವಿವರಣೆ**- ನರಸಿಂಹ ನಖಸ್ತುತಿ ಇದು. ವಾಯುಸ್ತುತಿಯ ಕೊನೆ ಮೊದಲಲ್ಲಿ ಪಠಿಸಲಾಗುವ ಹರಿಸ್ತೋತ್ರ. ಪಂಡಿತಾಚಾರ್ಯರು ರಚಿಸಿದ ವಾಯುಸ್ತುತಿಗೆ ಆಚಾರ್ಯರು ತೊಡಿಸಿದ ಕವಚ. 'ಹರಿಸರ್ವೋತ್ತಮ' ಎಂದರೆ ವಾಯುದೇವರಿಗೆ ಸಂತೋಷ. 'ವಾಯುಜೀವೋತ್ತಮ' ಎಂದರೆ ಶ್ರೀಹರಿಗೆ ಸಂತೋಷ. ಅದಕ್ಕಾಗಿ ಆಚಾರ್ಯರು ವಾಯುಸ್ತುತಿಯಲ್ಲಿ ಹರಿಸ್ತುತಿಯನ್ನು ಸೇರಿಸಿದರು. ಅದರಲ್ಲೂ ನರಸಿಂಹಸ್ತುತಿ. ಆಚಾರ್ಯರ ಇಷ್ಟದೇವತೆ ನರಸಿಂಹ - 'ತದಿಷ್ಟ ದೇವತಾಂ ನರಹರಿಂ'। (ತತ್ತ್ವೋದ್ಯೋತ ಟೀಕಾ). ''ಲೋಕ ಕಂಟಕ ಹಿರಣ್ಯಕಶಿಪುವನ್ನು ನಾಶಮಾಡಿ ಪ್ರಹ್ಲಾದನನ್ನು ಕಾಪಾಡಿದ ನರಸಿಂಹನ ಆ ಉಗುರುಗಳು ನಮ್ಮ ಬಾಹ್ಯಾಭ್ಯಂತರ ವಿಘ್ನಗಳನ್ನು ಪರಿಹರಿಸಿ ರಕ್ಷಿಸಲಿ'' ಎಂದು ಆಚಾರ್ಯರು ನಮಗಾಗಿ 'ಪಾಂತು' ಎಂದಿದ್ದಾರೆ.

ವಾಯುಸ್ತುತಿಯ ಆರಂಭದಲ್ಲಿ ಎರಡು ಪದ್ಯಗಳಿವೆ. ಒಂದು ನಖಸ್ತುತಿ ಮತ್ತೊಂದು ಹರಿಸ್ತುತಿ. 'ಜಗದುತ ವಶಗಂ ಕಿಂಕರಾಃ ಶಂಕರಾದ್ಯಾಃ' ಎಂದು ವಾಯುಸ್ತುತಿ ವಾಯುಜೀವೋತ್ತಮತ್ವವನ್ನು ಸಾರಿದಾಗ ಹರಿಸರ್ವೋತ್ತಮತ್ವದ ಘೋಷಣೆ ಬೇಡವೆ? ಅದಕ್ಕಾಗಿ ಎರಡನೆಯ ಶ್ಲೋಕ.

೧. ಕಂಠೀರವಾಸ್ಯ-ಕಂಠೀರವ=ಸಿಂಹ. ಅದರ ಆಸ್ಯ=ಮುಖ.

೨. ಶಾಂತ-ಪ್ರವಿತತ-ಮನಸಾ, ದೇವ-ಋಷಿ-ಮುನಿಗಳ ಮನಸ್ಸು ಶಾಂತ ಹಾಗೂ ಭಗವಂತನ ಅನೇಕ ಗುಣಗಳನ್ನು ತಿಳಿದು ವಿಸ್ತೃತವಾದುದು (ಪ್ರವಿತತ). ಶಾಂತವಾಗಿರಲು ಕಾರಣ 'ದಾರಿತಾರಾತಿ'. ಅರಾತಿ=ಶತ್ರುಗಳು. ಹೊರಗಿನ ಹಾಗೂ ಒಳಗಿನ ಕಾಮಾದಿ ಶತ್ರುಗಳು ಮನಸ್ಸಿನ ಶಾಂತಿಯನ್ನು ಕೆದಕುತ್ತಾರೆ. ಮಹಾತ್ಮರು ಇವೆರಡನ್ನೂ ಗೆದ್ದವರು. 'ಪ್ರವಿತತ-ವಿಸ್ತೃತ' ವಾಗಲು ಕಾರಣ 'ದೂರ ಪ್ರಧ್ವಸ್ತಧ್ವಾಂತ' ಧ್ವಾಂತ=ಅಜ್ಞಾನದ ಕತ್ತಲು. ಅದು ಮತ್ತೆ ಕವಿಯದಷ್ಟು ದೂರ ಹೋಗಿದೆ. ಆದ್ದರಿಂದ ಜ್ಞಾನದ ಬೆಳಕು ಮಿಂಚುತ್ತಿದೆ. ಹೀಗೆ ನಿಶ್ಚಲ ಮನಸ್ಸಿನಿಂದ ಅವರು ಉಗುರುಗಳನ್ನು ಧ್ಯಾನಿಸುತ್ತಿದ್ದಾರೆ.

**ಲಕ್ಷ್ಮೀಕಾಂತ ಸಮಂತತೋಽಪಿ ಕಲಯನ್ ನೈವೇಶಿತುಸ್ತೇ ಸಮಂ**
**ಪಶ್ಯಾಮ್ಯುತ್ತಮವಸ್ತು ದೂರತರತೋಽಪಾಸ್ತಂ ರಸೋ ಯೋಽಷ್ಟಮಃ ।**
**ಯದ್-ರೋಷೋತ್ಕರ-ದಕ್ಷ-ನೇತ್ರ-ಕುಟಿಲ-ಪ್ರಾಂತೋತ್ಥಿತಾಗ್ನಿ-ಸ್ಫುರತ್-**
**ಖದ್ಯೋತೋಪಮ-ವಿಸ್ಫುಲಿಂಗ-ಭಸಿತಾ ಬ್ರಹ್ಮೇಶ-ಶಕ್ರೋತ್ಕರಾಃ ॥ ೨ ॥**

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಾ**
**ನರಸಿಂಹನಖಸ್ತುತಿಃ ಸಮಾಪ್ತಾ ॥**

**ಅನ್ವಯಾರ್ಥ**-ಲಕ್ಷ್ಮೀಕಾಂತ=ರಮೆಯರಸನೆ, ಸಮಂತತಃ=ಸುತ್ತಮುತ್ತ ಕಲಯನ್ನಪಿ=ಹುಡುಕಿದರೂ ಈಶಿತುಃ=ಒಡೆಯನಾದ ತೇ=ನಿನಗೆ ಸಮಂ= ಸರಿದೂಗುವವರನ್ನು ನ ಪಶ್ಯಾಮಿ=ಕಾಣಲಾರೆ. ಅಂದಮೇಲೆ, ಉತ್ತಮವಸ್ತು= ನಿನಗಿಂತ ಮಿಗಿಲಾದ ವಸ್ತು ಯಃ=ಯಾವ ಅಷ್ಟಮಃ=ಎಂಟನೆಯ ರಸಃ ಇವ=ರಸದಂತೆ ದೂರತಃ=ದೂರದಲ್ಲೇ ಅಪಾಸ್ತಂ=ನಿರಾಕರಿಸಲ್ಪಟ್ಟಿದೆ.

ಯತ್=ಯಾವ ಕಾರಣದಿಂದ ಬ್ರಹ್ಮ-ಈಶ-ಶಕ್ರ-ಉತ್ಕರಾಃ=ಬ್ರಹ್ಮ ರುದ್ರ ಇಂದ್ರಾದಿ ದೇವತೆಗಳ ಸಮೂಹವೂ ನಿನ್ನ ರೋಷ-ಉತ್ಕರ-ದಕ್ಷನೇತ್ರ- ಕುಟಿಲ-ಪ್ರಾಂತ-ಉತ್ಥಿತ-ಅಗ್ನಿ-ಸ್ಫುರತ್-ಖದ್ಯೋತ-ಉಪಮ-ವಿಸ್ಫುಲಿಂಗ- ಭಸಿತಾಃ, ರೋಷ=ಸಿಟ್ಟಿನ ಉತ್ಕರ=ಸಂಚಯವುಳ್ಳ ದಕ್ಷ=ಶತ್ರುನಿಗ್ರಹದಲ್ಲಿ ಸಮರ್ಥವಾದ ನೇತ್ರ=ಕಣ್ಣಿನ ಕುಟಿಲ=ಓರೆಯಾದ ಪ್ರಾಂತ=ತುದಿಯಿಂದ ಉತ್ಥಿತ=ಎದ್ದ ಅಗ್ನಿ=ಬೆಂಕಿಯ ಸ್ಫುರತ್=ಮಿಣುಕುವ ಖದ್ಯೋತ=ಮಿಣುಕು

ಹುಳಕ್ಕೆ ಉಪಮಾ=ಸರಿಗಟ್ಟುವ ವಿಸ್ಫುಲಿಂಗಾ=ಕಿಡಿಗಳಿಂದ ಭಸಿತಾಃ ಬೂದಿಯಾಗುವುದು.

**ಭಾವಾರ್ಥ-** ರಮಾರಮಣನೆ, ನೀನೇ ಸರ್ವೋತ್ತಮ. ನಿನಗೆ ಸಮನಾದವರೇ ಇಲ್ಲ. ಅಂದಮೇಲಿ ಇನ್ನು ಉತ್ತಮರೆಲ್ಲಿ? ರಸಗಳು ಒಟ್ಟು ಆರು - ಸಿಹಿ, ಹುಳಿ, ಉಪ್ಪು, ಖಾರ, ಒಗರು ಮತ್ತು ಕಹಿ. ಇದು ಬಿಟ್ಟು ಏಳನೆಯ ರಸವೇ ಇಲ್ಲ. ಇನ್ನು ಎಂಟನೆಯ ರಸವೆಲ್ಲಿ? ಬ್ರಹ್ಮಾದಿ ದೇವತೆಗಳೂ ಪ್ರಲಯಕಾಲದಲ್ಲಿ ನಿನ್ನ ಕಡೆಗಣ್ಣ ಕುಡಿನೋಟಕ್ಕೆ ಓಡಿ ಭಸ್ಮವಾಗುವರು.

**ವಿವರಣೆ-** ''ನೃತ್ಯತೇ ಪ್ರಲಯೇ ದೇವಃ ನೃಸಿಂಹಾಕೃತಿರೀಶ್ವರಃ ॥''

''ಪ್ರಲಯಕಾಲದಲ್ಲಿ ಭಗವಂತ ನೃಸಿಂಹರೂಪತಾಳಿ ತಾಂಡವವಾಡುತ್ತಾನೆ. ಅವನ ಕಡೆಗಣ್ಣನೋಟಕ್ಕೆ ಬ್ರಹ್ಮಾದಿಗಳೂ ಭಸ್ಮವಾಗುತ್ತಾರೆ. ಆದ್ದರಿಂದ ಅವನೇ ಸರ್ವೋತ್ತಮ'' ಎಂದು ಹೇಳುವ ಈ ಶ್ಲೋಕವೂ ನರಸಿಂಹದೇವನ ಸ್ತುತಿಯೇ ಆಗಿದೆ.

ಮೊದಲನೆಯ ಶ್ಲೋಕದ ಪೂರ್ವಾರ್ಧ ಶಾರ್ದೂಲವಿಕ್ರೀಡಿತ ವೃತ್ತದಲ್ಲಿದ್ದರೆ ಉತ್ತರಾರ್ಧ ಸ್ರಗ್ಧರಾ ವೃತ್ತದಲ್ಲಿದೆ. ಶಾರ್ದೂಲ-ಹುಲಿಯಂತೆ ನಟಿಸಿ ಹಿರಣ್ಯಕನನ್ನು ಕೊಂದ ನರಸಿಂಹ ಸ್ರಕ್-ಕರುಳಿನ ಮಾಲೆಯನ್ನೂ ಧರಿಸಿದ ಎಂಬ ಸೂಚನೆಯನ್ನು ಆಚಾರ್ಯರು ನೀಡಿದ್ದಾರೆ. ಎರಡನೆಯ ಶ್ಲೋಕ ಶಾರ್ದೂಲ ವಿಕ್ರೀಡಿತಲ್ಲಿದೆ.

**॥ ಇಲ್ಲಿಗೆ ನರಸಿಂಹ ನಖಸ್ತುತಿಯ ಕನ್ನಡ ಅನುವಾದ ಮುಗಿಯಿತು. ॥**

ಶ್ರೀಮದಾನಂದತೀರ್ಥ ಭಗವತ್ಪಾದರು ರಚಿಸಿದ

# ಶ್ರೀ ಸರ್ವಮೂಲ ಗ್ರಂಥಗಳು

(ಕನ್ನಡ ಅನುವಾದ ವಿವರಣೆ ಸಹಿತ)

## ಕಂದುಕಸ್ತುತಿ

ಅನುವಾದ :

ವಿದ್ವಾನ್ ಕೆ. ಹಯವದನಪುರಾಣಿಕ ಎಂ. ಎ.

**ಶ್ರೀಮದಾಚಾರ್ಯರು ವಾಸುದೇವನಾಗಿ ಬಾಲ್ಯದಲ್ಲಿ ಚೆಂಡಾಟವಾಡುತ್ತಿದ್ದಾಗ ರಚಿಸಿದ ಆಶುಕವಿತೆ 'ಕಂದುಕಸ್ತುತಿ'**

**ಏವಂ ಸುಭಾಷಿತಸ್ತೋತ್ರ ಗಾಥಾದಿಕೃತಿಸತ್ಕೃತೇಃ ।**
**ತ್ವಯಿ ರತ್ನಾಕರೇ ರತ್ನಶ್ರೀರ್ನೇರ್ವಾ ಗಣಯಂತಿ ಕೇ॥**

**(ಸುಮಧ್ವವಿಜಯ)**

**'ಗುರುಗಳೆ, ನೀವು ರಚಿಸಿದ ಸುಭಾಷಿತಗಳು, ಸ್ತೋತ್ರಗಳು ಬಹಳಷ್ಟಿವೆ. ಸಮುದ್ರ ರತ್ನಾಕರ. ಅಂತೆಯೇ ನೀವೂ. ಸಮುದ್ರದಲ್ಲಿ ರತ್ನಗಳೆಷ್ಟಿವೆಯೆಂದು ಎಣಿಸುವವರಾರು ?'**

ಶ್ರೀಮದಾನಂದತೀರ್ಥಭಗವತ್ಪಾದರು ರಚಿಸಿದ

# ಕಂದುಕಸ್ತುತಿ

॥ ಹರಿಃ ಓಂ ॥

ಅಂಬರ ಗಂಗಾ ಚುಂಬಿತ ಪಾದಃ
ಪದತಲ ವಿದಲಿತ ಗುರುತರ ಶಕಟಃ।
ಕಾಲಿಯ ನಾಗಕ್ಷ್ವೇಲ ನಿಹಂತಾ
ಸರಸಿಜ ನವದಲ ವಿಕಸಿತ ನಯನಃ ॥

ಕಾಲಘನಾಲೀ ಕರ್ಬುರ ಕಾಯಃ
ಶರಶತ ಶಕಲಿತ ರಿಪುಶತ ನಿವಹಃ ।
ಸಂತತಮಸ್ಮಾನ್ ಪಾತು ಮುರಾರಿಃ
ಸತತಗ ಸಮಜವ ಖಗಪತಿ ನಿರತಃ ॥

॥ ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತಾ
ಕಂದುಕಸ್ತುತಿಃ ಸಂಪೂರ್ಣಾ ॥

ಅಂಬರಗಂಗಾ= ಆಕಾಶಗಂಗೆಯಿಂದ, ಚುಂಬಿತ= ಚುಂಬಿತವಾದ ಪಾದಃ= ಪಾದಉಳ್ಳವನು, ಪದತಲ= ಅಂಗಾಲಿನಿಂದ, ವಿದಲಿತ= ಪುಡಿಮಾಡಲ್ಪಟ್ಟ, ಗುರುತರ= ಬಲುಭಾರವಾದ, ಶಕಟಃ= ಗಾಡಿ ಉಳ್ಳವನು, ಕಾಲಿಯನಾಗ= ಕಾಲಿಯನಾಗನ, ಕ್ಷ್ವೇಲ= ವಿಷವನ್ನು, ನಿಹಂತಾ= ಕಳೆದವನು, ಸರಸಿಜ= ತಾವರೆಯ, ನವದಲ= ಎಳೆಯದಾದ ಎಸಳಿನಂತೆ, ವಿಕಸಿತ= ಅರಳಿದ, ನಯನಃ= ಕಣ್ಣುಗಳುಳ್ಳವನು.

ಕಾಲ= ಕಪ್ಪಾದ, ಘನಾಲೀ= ಮೋಡಗಳ ಸಮೂಹದಂಥ, ಕರ್ಬುರ= ಚಿತ್ರವರ್ಣದ, ಕಾಯಃ= ಶರೀರ ಉಳ್ಳವನು, ಶರಶತ= ನೂರಾರು ಬಾಣ

ಗಳಿಂದ, ಶಕಲಿತ=ಚೂರುಚೂರಾಗಿಸಲ್ಪಟ್ಟ, ರಿಪುಶತನಿವಹಃ=ಶತ್ರುಗಳ ನೂರಾರು ಸಮೂಹಗಳುಳ್ಳವನು, ಸತತಗ=ವಾಯುವಿಗೆ, ಸಮಜವ=ಸಮಾನ ವೇಗವುಳ್ಳ, ಖಗಪತಿ=ಗರುಡನ ಮೇಲೆ, ನಿರತಃ=ಕುಳಿತಿರುವವನು, ಇಂಥ, ಮುರಾರಿಃ=ಶ್ರೀಕೃಷ್ಣ, ಸಂತತಂ=ಯಾವಾಗಲೂ, ಅಸ್ಮಾನ್=ನಮ್ಮನ್ನು, ಪಾತು=ಕಾಪಾಡಲಿ.

**ವಿವರಣೆ :** ಇದು ಶ್ರೀಕೃಷ್ಣಸ್ತುತಿ. ಆಕಾಶದಲ್ಲಿ ಎತ್ತರದಿಂದ ಬರುವ ಚೆಂಡನ್ನು ಒದೆಯಲು ಕಾಲೆತ್ತುವಾಗ ಪುಟ್ಟ ಬಾಲಕ ಶ್ರೀಕೃಷ್ಣ ತ್ರಿವಿಕ್ರಮನಂತಾಗುತ್ತಾನೆ. ಆಗ ಅವನ ಕಾಲನ್ನು ಆಕಾಶಗಂಗೆ ಚುಂಬಿಸುತ್ತಾಳೆ.

ಶ್ರೀಕೃಷ್ಣ ಶಿಶುವಾಗಿ ತನ್ನ ಪುಟ್ಟ ಅಂಗಾಲಿಂದ ಒದ್ದಾಗ ಶಕಟಾಸುರನ ಗಾಡಿ ಅದೆಷ್ಟು ಭಾರವಾಗಿದ್ದರೂ ಅನಾಯಾಸವಾಗಿ ಮುರಿದು ಬಿದ್ದಿತು.

ಗೋಪ ಬಾಲಕನಾಗಿ ಕೃಷ್ಣ ಕಾಳಿಯನ ಹೆಡೆಗಳ ಮೇಲೆ ಕುಣಿದಾಗ ಅವನ ವಿಷವೆಲ್ಲ ವಮನವಾಯಿತು.

ಮುಂದೆ ಕಂಸ ಜರಾಸಂಧ ಮುಂತಾದವರೊಡನೆ ಯುದ್ಧ ಮಾಡಿದಾಗ ಕೃಷ್ಣನ ನೂರಾರು ಬಾಣಗಳಿಂದ ಶತ್ರುಗಳು ಚೂರುಚೂರಾದರು.

ವಾಯುವೇಗದ ಗರುಡನ ಹೆಗಲೇರಿ ಸಂಚರಿಸುವ ಕೃಷ್ಣ ಪುಟ್ಟ ಬಾಲಕನಾಗಿ ಯಶೋದೆಯ ಮನೆಯಂಗಳದಲ್ಲಿ ಅರಳಿದ ತಾವರೆಯಂಥ ಕಣ್ಣುಗಳಿಂದ ನೋಡುತ್ತ ಚೆಂಡಾಟವಾಡಿದರೆ, ಆಡಿ ಮೈ ಬೆವರಿದರೆ, ಕಾಮುರ್ಗಿಲಿನಂತೆ ಚಿತ್ರವರ್ಣದಿಂದ ಹೊಳೆಯುತ್ತಾನೆ. ಕರಿಮೋಡದಲ್ಲಿ ನೀರಹನಿಗಳಿಗೆ ಸೂರ್ಯನ ಕಿರಣಗಳು ಬಿದ್ದಾಗ ಹೇಗೋ ಹಾಗೆ ಕೃಷ್ಣನ ಮೈಯಲ್ಲಿ ಬೆವರ ಹನಿಗಳ ಮೇಲೆ ಬಿಸಿಲು ಬಿದ್ದಾಗಲೂ ಚಿತ್ರವರ್ಣ ಕಂಗೊಳಿಸುತ್ತದೆ. ಅದರಿಂದ ಆತನದು 'ಕರ್ಬುರ ಕಾಯ'. ಅಥವಾ ಕರ್ಬುರವೆಂದರೆ ಬಂಗಾರ.

**'ಆ ಪ್ರಣಖಾತ್ ಸರ್ವ ಏವ ಸುವರ್ಣಃ'**

ಎಂಬಂತೆ ಹಿರಣ್ಮಯವಾದ ಆನಂದಮಯವಾದ ಶರೀರ ಮೇಘಶ್ಯಾಮವರ್ಣದಿಂದ ಹೊಳೆಯುತ್ತದೆ. ಇಂಥ ಮುರಾರಿ ಶ್ರೀಕೃಷ್ಣ ಸದಾ ನಮ್ಮನ್ನು ಕಾಪಾಡಲಿ.

ಇದು ಶ್ರೀಕೃಷ್ಣಸ್ತುತಿ, ವಿಶೇಷವಾಗಿ ಕೃಷ್ಣಪಾದಸ್ತುತಿ.

ಸ್ವತ್ವಾನಂದಃ ಸಮುದ್ದಿಷ್ಟೋ ಪರಿತಿ ಜ್ಞಾನಮುಚ್ಯತೇ

ಎಂಬಂತೆ ಆನಂದಜ್ಞಾನರೂಪವಾದ ಎರಡು ಪಾದಗಳು ಉಪಾಸಕನಿಗೆ ಆನಂದ ಜ್ಞಾನಗಳನ್ನು ನೀಡುತ್ತವೆ. ಹೀಗೆ ಆನಂದ ಜ್ಞಾನದಾಯಕವಾದ ಈ ಸ್ತುತಿಗೆ ಕಂದುಕಸ್ತುತಿ ಎಂಬ ಹೆಸರು ಸಾರ್ಥಕ. ಏಕೆಂದರೆ 'ಕಂ' ಆನಂದವನ್ನು 'ದುಕ' ಕೊಡುವಂಥಹುದು. 'ಕಂ, ದುಕ'. ಇಲ್ಲಿ ಆನಂದವೆಂಬುದು ಉಪಲಕ್ಷಣ. ಆನಂದ ಜ್ಞಾನದಾಯಕ ಎಂದೇ ಹೇಳಿದಂತಾಗುವುದು. ಮುಂದೆ 'ಆನಂದತೀರ್ಥ'ರೆನಿಸಲಿದ್ದ ಶ್ರೀಮದಾಚಾರ್ಯರು ಬಾಲ್ಯದಲ್ಲಿಯೂ 'ಕಂ-ದುಕ' ಸ್ತುತಿಯನ್ನೇ ಹಾಡಿದರು. ಕಂದುಕದಿಂದ, ಅಂದರೆ, ಚೆಂಡಿನಿಂದಲೆ ಆಟವಾಡಿದರು.

ಹರಿವಾಯುಗಳಿಗೆ ಪ್ರಪಂಚ ಸೃಷ್ಟ್ಯಾದಿಗಳೆಂದರೆ ಕೇವಲ ಚೆಂಡಿನಾಟವೆ ಸರಿ. ಈ ಆಟದಲ್ಲಿ ಸಾತ್ವಿಕ ಜೀವರನ್ನು ಬಲು ಎತ್ತರಕ್ಕೆ ಎಸೆಯುತ್ತಾರೆ. ರಾಜಸರನ್ನು ನಡುವೆ ಅತ್ತ ಇತ್ತ ಎಸೆಯುತ್ತಾರೆ. ತಾಮಸರನ್ನು ಕೆಳಗೆ ಎಸೆಯುತ್ತಾರೆ.

ಇಲ್ಲಿಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ರಚಿತವಾದ
ಶ್ರೀ ಕಂದುಕಸ್ತುತಿ ಮುಗಿಯಿತು.

ಶ್ರೀಮದಾನಂದತೀರ್ಥಭಗವತ್ಪಾದರು ರಚಿಸಿದ

# ಶ್ರೀ ಸರ್ವಮೂಲ ಗ್ರಂಥಗಳು

(ಕನ್ನಡ ಅನುವಾದ ವಿವರಣೆ ಸಹಿತ)

## ಬಿಲ್ವಮಂಗಲಃ ಸಾಧುಃ

ಅನುವಾದ :

ವಿದ್ವಾನ್ ಎ. ಹರಿದಾಸಭಟ್ಟ ಎಂ. ಎ.

## ॥ ಬಿಲ್ವ ಮಂಗಲಃ ಸಾಧುಃ ॥

ಹೃದಯ ಗುಹೆಯಲ್ಲಿ ಆತ್ಮ ಅಂತರಾತ್ಮ ರೂಪಗಳಿಂದ ಇರುವ ಭಗವಂತ ಸಾರರೂಪ ಹಾಗೂ ನಿರ್ಭೀತ.

**ವಿವರಣೆ** - ಈ ಏಳು ವರ್ಣಗಳ ವಾಕ್ಯ ಸರ್ವಮೂಲದ ಕೊನೆಯ ವಾಕ್ಯವೆಂದು ಪ್ರಸಿದ್ಧಿ ಇದೆ. ಉತ್ತರಾದಿಮಠದ ಪರಂಪರೆಯಲ್ಲಿ ಬಂದ ಶ್ರೀ ಸತ್ಯಪರಾಯಣತೀರ್ಥರು ಸುಮಾರು ಹದಿನೆಂಟು ಅರ್ಥಗಳನ್ನು ಇದಕ್ಕೆ ಹೇಳಿದ್ದಾರೆ. ಆ ಗ್ರಂಥದ ಪ್ರಾರಂಭದಲ್ಲಿ-

**'ಬಿಲ್ವ ಮಂಗಲಃ ಸಾಧುಃ' ಇತಿ ಸರ್ವಜ್ಞೋಕ್ತಂ ವಾಕ್ಯಂ ಸರ್ವಮೂಲಾಂತರ್ಭೂತಂ ಇತಿ ಸಂಪ್ರದಾಯವಿದಃ''** ಎಂದಿದ್ದಾರೆ. ಈ ವಾಕ್ಯವು ಸರ್ವಮೂಲದಲ್ಲಿ ಸೇರಿದೆ ಎಂದು ಸಂಪ್ರದಾಯವಾದಿಗಳು ಹೇಳುತ್ತಾರೆ ಎಂದು ಅದರ ಅಭಿಪ್ರಾಯ.

ಈ ವಾಕ್ಯದ ಹಿನ್ನೆಲೆ ಕುರಿತು ಎರಡು ಅಭಿಪ್ರಾಯಗಳು ಇವೆ.

೧. ಹತ್ತನೇ ಶತಮಾನದಲ್ಲಿದ್ದ ಶೈವ ಪಂಡಿತ ಲೀಲಾಶುಕ. ಅವನನ್ನು ಪಶ್ಚಿಮ ಬಂಗಾಳದಲ್ಲಿ 'ಬಿಲ್ವ ಮಂಗಲ' ಎಂದು ಕರೆಯಲಾಗುತ್ತಿತ್ತು. ಅವನು ಶೈವನಾದರೂ ಶ್ರೀಕೃಷ್ಣಭಕ್ತ. ದಕ್ಷಿಣಕ್ಕೆ ಬಂದ 'ಚೈತನ್ಯರು', ಇವನ ಗ್ರಂಥವನ್ನು ಪರಿಶೀಲಿಸಿ ಕೃಷ್ಣಭಕ್ತಿಯ ಪಂಥವನ್ನು ಪ್ರಚಾರ ಮಾಡಿದರು. ಈ ಸಾಧುವಿನ ಬಗ್ಗೆ ಶ್ರೀಮಧ್ವಾಚಾರ್ಯರಲ್ಲಿ ಶಿಷ್ಯರು ಕೇಳಿದಾಗ ಆಚಾರ್ಯರು 'ಬಿಲ್ವಮಂಗಲಃ ಸಾಧುಃ' ಎಂದರು. ಅಂದರೆ 'ಬಿಲ್ವಂಮಂಗಲನೆಂಬ ಈ ಪಂಡಿತ ಸಾತ್ವಿಕ' ಎಂದು ಆಚಾರ್ಯರ ಅಭಿಪ್ರಾಯ.

೨. ಬಿಲ್ವ ಮಂಗಲನೆಂಬ ಒಬ್ಬ ಸ್ಮಾರ್ತ ವಿದ್ವಾಂಸ ಆಚಾರ್ಯರು ರಚಿಸಿದ ಸರ್ವಮೂಲಗ್ರಂಥಗಳನ್ನು ನೋಡಿ ಮೆಚ್ಚಿ ಈ ಗ್ರಂಥಗಳಲ್ಲಿ ಒಟ್ಟು ೧೮ ಲಕ್ಷ ಅಕ್ಷರಗಳಿವೆಯೇ? ಎಂದು ಕೇಳಿದಾಗ ಆಚಾರ್ಯರು ಈ ಏಳು ಅಕ್ಷರಗಳನ್ನು ಸೇರಿಸಿದರೆ ಹದಿನೆಂಟು ಲಕ್ಷವಾಗುತ್ತದೆ ಎಂದು ಹೇಳಿ 'ಬಿಲ್ವಂಮಂಗಲಃ ಸಾಧುಃ' ಎಂಬ ವಾಕ್ಯವನ್ನು ಹೇಳಿದರು.

ಹೀಗೆ ಈ ವಾಕ್ಯ ಲೌಕಿಕವಾಗಿ ಪ್ರಸ್ತುತವಾಗಿದ್ದರೂ ಅದಕ್ಕೂ ಆಧ್ಯಾತ್ಮಿಕ ಅರ್ಥವನ್ನು ಹೇಳಿ ಶ್ರೀ ಸತ್ಯಪಾರಾಯಣತೀರ್ಥರು ಸರ್ವಮೂಲಗಳ ಜೊತೆ ಸೇರಿಸುವ ಅನೌಚಿತ್ಯವನ್ನು ಪರಿಹರಿಸಿದ್ದಾರೆ.